"ಹೀಗಾದರೆ ನೀವು ಮದುವೇನೆ ಮಾಡಿಕೊಳ್ಳಬಾರದಾಗಿತ್ತು. ಮಗುವಿನ ಲಾಸ ವಿಲಾಸಗಳು ಬೇಕೆ ನಿಮಗೆ ?... ....ಇವತ್ತು 'ಮಾಮ, ಮಾಮ,' ಎಂಬ ಮಾತನ್ನು ಬೇರೆ ಕಲಿತಿದ್ದಾನೆ. ಎಷ್ಟು ಮುದ್ದಾಗಿ ಹೇಳ್ತಾನೆ ......" ಇಲ್ಲಿ ಸೀತಮ್ಮನವರ ಮಾತನ್ನು ನಾವು ನಂಬುವುದಿಲ್ಲ. ರಾಮುವಂಥ ರಸಿಕರನ್ನು ನಾವಿನ್ನೂ ಕಂಡಿಲ್ಲ. ಹಿಂದೆ ಮೂರುಹೊತ್ತು ಮನೆಯಲ್ಲಿಯೇ ಇರುತ್ತಿದ್ದುದನ್ನು ಸೀತಮ್ಮನವರು ಮರೆತುಬಿಟ್ಟರೇ ? ಆದರೆ ಯಾವಾಗಲೂ ಅದು ಎಲ್ಲಿಂದ ಸಾಧ್ಯ !

ಒಂದು ವಿಧದಲ್ಲಿ ನೋಡಿದರೆ ಸೀತಮ್ಮನವರಿಗೆ ಹಾಗೆ ತೋರಿದ್ದೂ ಸಹಜವೇ. ಸನ್ನಿವೇಶ ಹಾಗಿದೆ; ಎಳೆಯ ಮಗು. ಚೊಚ್ಚಲ ಮಗು. ಮುದ್ದಾದ ಮಾತು. ಮಾತನ್ನೀಗ ಕಲಿಯುತ್ತಿರುವುದು. ಪ್ರತಿದಿನವೂ ಹೊಸದಿನವಾಗಿ ತೋರುವುದು.

ರಾಮು ಬೇಸರದಿಂದ "ಊಂ, ಇರಲಿ" ಎಂದನು. ಅವನ ಮನಸ್ಸು "ಶ್ಯಾಮಣ್ಣ ಮೇಷ್ಟರು ವಿಷಪ್ರಯೋಗ ಮಾಡಿದರಲ್ಲಾ, ಆಗ ಅವರ ಮನಸ್ಸು ಹೇಗೆ ಉಬ್ಬರವಿಳಿತದಿಂದ ಅಲ್ಲೋಲ ಕಲ್ಲೋಲವಾಗಿತ್ತು! ಒಂದು ಸಲ ಸ್ಥಿರಸಂಕಲ್ಪ. ಒಡನೆಯೇ, ಏನು ನಾನು ಮಾಡುವುದು ಸರಿಯೆ ಎಂಬ ಪ್ರಶ್ನೆ. ಆದದ್ದಾಗಲಿ ಯತ್ನಿಸುವುದು ಎಂದು ಮಾಡಿಕೊಳ್ಳು ವುದು........ಮಥನ." ಈ ವಿಚಾರದಲ್ಲಿ ತಲ್ಲೀನವಾಗಿದೆ.

"ಹಾಗಾದರೆ ನೀವೇ ಕುಳಿತಿರಿ. ಎಷ್ಟು ಹೊತ್ತು ಬೇಕಾದರೂ ಕುಳಿತಿರಿ. ನಾನು ಹೊರಟು ಹೋಗಿ ಬಿಡ್ತೀನಿ" ಎಂದು ಹೊರಟು ಬಂದು ಮಲಗಿದರು. ರಾಮು ಜೊತೆಯಲ್ಲಿರುವವರಿಗೆ ಅವನ ಹೃದಯ ವೆಂತಹುದೆಂಬುದು ಗೊತ್ತು. ಬಲು ತಿಳಿ ಹೃದಯ. ಅನ್ನುವಾಗ ಅಂದು ಬಿಡುತ್ತಾನೆ. ಆ ಮೇಲೆ ಏನೆಂದು ಬಿಟ್ಟೆನೋ ಎಂದು ಚಿಂತಿಸುತ್ತಾನೆ.

"ಅಯ್ಯೋ ನಾನು ಒಬ್ಬರನ್ನು ಅನ್ಯಥಾ ನೋಯಿಸಬಾರದು ಎಂದು ಕೊಂಡು ನಡೆದುಕೊಂಡು ಬರುತ್ತಿದ್ದೀನಿ. ಈಗ ಅನ್ಯಾಯವಾಗಿ ಇವರ ಮನಸ್ಸನ್ನು ನೋಯಿಸಿದೆನಲ್ಲಾ. ಇಲ್ಲೋ ಮಾಡೀರೋದು ಏನೂ ಇಲ್ಲ. ನಾಲ್ಕು ಅಕ್ಷರಗಳನ್ನು ಕೂಡ ಬರೆದಿಲ್ಲ. ಅಲ್ಲಿ ಅವರನ್ನು ಬೇರೆ ನೋಯಿ

ಸಿದೆ. ಈಚೀಚೆಗೆ ಯಾತಕ್ಕೆ ಹೀಗಾಗುತ್ತಿದೆಯೋ" ಎಂದು ಚಿಂತಿಸ ತೊಡಗಿದನು.

ಕತೆ ಅದರ ಪಾಡಿಗೆ ಅದು ಹೋಯಿತು. ಮನಸ್ಸು ಈ ಕಡೆಗೆ ತಿರುಗಿತು. ಕೊನೆಗೆ ಕಾಗದವನ್ನು ತೆಗೆದುಕೊಂಡು "ದಯವಿಟ್ಟು ಕ್ಷಮಿಸ ಬೇಕು. ಬರುವ ಸಂಚಿಕೆಗೆ ಕತೆಯನ್ನು ಕಳುಹಿಸುತ್ತೇನೆ. ಈ ಸಲ ಆಗಲಿಲ್ಲ. ತಪ್ಪೆಲ್ಲಾ ನಂದು. ಎಷ್ಟು ಆಕ್ಷೇಪಣೆ ಬಂದರೂ ಹೊತ್ತುಕೊಳ್ಳಲು ಸಿದ್ಧ ವಾಗಿದ್ದೇನೆ." ಎಂದು ಬರೆದು ಮಡಿಸಿ ಲಕ್ಕೋಟೆಯ ಮೇಲೆ—

ಶ್ರೀಯುತ ದತ್ತಾತ್ರಿರಾಯರಿಗೆ,
ಸಂಪಾದಕರು "ಕತೆಗಾರ"
ಬೆಂಗಳೂರು.

ಎಂದು ವಿಳಾಸ ಹಾಕಿ ಅದರಲ್ಲಿಟ್ಟನು.

ಸೀತಮ್ಮನವರು ಪುನಃ ಬಾಗಿಲನ್ನು ಓರೆಮಾಡಿ "ತಿರುಗಿ ಬರೆಯು ವುದಕ್ಕೆ ಕುಳಿತುಬಿಟ್ಟರೇ? ನಾಳೆ ಮೈಸೂರಿಗೆ ಬೇರೆ ಸರ್ಕೀಟು ಹೋಗ ಬೇಕು ಅಂತೀರಿ. ಆಗಲೇ ಒಂದೂವರೆ ಗಂಟೆಯಾಯಿತು" ಎಂದರು.

"ಬರೆಯೋದೂ ಇಲ್ಲ, ಸುಡುಗಾಡೂ ಇಲ್ಲ" ಎಂದು ಹೇಳಿ ಬಂದು ಮಂಚದ ಮೇಲೆ ಬಿದ್ದುಕೊಂಡನು. ಸೀತಮ್ಮನವರು ಪಕ್ಕದಲ್ಲಿ ಹಾಗೇ ಪವಡಿಸಿ ರಾಮುವಿನ ಹಣೆಯ ಮೇಲೆ ಕೈಯಾಡಿಸುತ್ತಾ "ಯಾಕೆ ಕೋಪ ಬಂತೇ. ನಾನು ತಮಗೆ ತೊಂದರೆ ಕೊಟ್ಟೆನೇ" ಎಂದು ಮೃದು ವಾಗಿ ಕೇಳಿದರು.

"ಏನೂ ಇಲ್ಲ" ಎಂದು 'ರಗ್ಗ'ನ್ನು ಎಳೆದುಕೊಂಡು ಮುಸು ಕಿಟ್ಟುಕೊಂಡನು. ಬೆಳಗಿನಿಂದ ಬಹಳ ಆಯಾಸಪಟ್ಟಿದ್ದನು. ಇವತ್ತಾಗಲೇ ಇಪ್ಪತ್ತೈದನೆಯ ತಾರೀಖು. ನೂರೆಂಟು "ಫೈಲು"ಗಳು. ಇದರ ಜೊತೆಗೆ ಒಂದೆರಡು ರೆವಿನ್ಯೂ ಕೇಸುಗಳಿದ್ದವು. ನಾಳೆ ಸರ್ಕೀಟಿಗೆ ಹೊರಡ ಬೇಕಾಗಿದೆಯಲ್ಲಾ, ಎಲ್ಲಾ ಮುಗಿಸಿಬಿಡಬೇಕೆಂದು ಮಾಡಿದ್ದನು. ಅನ್ಯಾ ಯವಾಗಿ ಶಾನುಭೋಗರು ಪಟೇಲರನ್ನು ಕಚೇರಿಗೆ ಅಲೆಯಿಸುವುದು ಇವನಿಗೆ ಸರಿಬೀಳುತ್ತಿರಲಿಲ್ಲ. ಈಗಾಗಲೇ ರಾಮು ಅಮಲ್‌ದಾರನಾಗಿರುವ ವಿಷಯ ನಿಮಗೆ ತಿಳಿಯದೇ ಇಲ್ಲ. ರಾಮೂನಿಗೆ ಈ ದಿನ ಸಾಕಾಗಿ

ಹೋಗಿತ್ತು. ಸಾಯಂಕಾಲ ಸ್ವಲ್ಪ ಹೊತ್ತು ಲಾಲ್‌ಬಾಗಿನಲ್ಲಿ ಅಲೆಯೋಣ ವೆಂದು ಅಲ್ಲಿಗೆ ಬಂದರೆ ಅಲ್ಲಿ ದತ್ತೂರಾಯರು ಭೇಟಿಯಾದರು. ಸಂಪಾದ ಕರ ಕೈಯಲ್ಲಿ ಸಿಕ್ಕಿಕೊಂಡವರಿಗೇ ಅದರ ವಿಚಾರ ಗೊತ್ತು. ಮಾನವುಳಿಸಿ ಕೊಳ್ಳಲು ಮನೆಗೆ ಬಂದು ಬರೆಯಲು ಕುಳಿತನು. ಇಲ್ಲಿ ಈ ರೀತಿ ನಡೆದು ಹೋಯಿತು. ಇದರಿಂದ ಆ 'ನೊಂದ ಮನಸ್ಸು, ಸೋತ ದೇಹ'ಕ್ಕೆ ಹಾಗೇ ಜೊಂಪು ಹಿಡಿಯಿತು.

ಸೀತಮ್ಮನವರಿಗೆ ನಿದ್ರೆ ಹತ್ತಲಿಲ್ಲ. "ಏನು ಬರೆಯುತ್ತಿದ್ದರೋ, ನಾನು ಎಂಥ ಕೆಲಸ ಮಾಡಿಬಿಟ್ಟೆ" ಎಂದು ಚಿಂತಿಸತೊಡಗಿದರು. "ಎದ್ದು ಹೋಗಿ ನೋಡಲೇ" ಎನ್ನಿಸಿತು. "ನೋಡುವುದು ಸರಿಯೇ" ಎಂಬ ಶಂಕೆ ತಲೆದೋರಿತು. "ಆಗಲಿ, ಹೋಗಿ ನೋಡುವುದು. ಇಲ್ಲದೆ ಇದ್ದರೆ ಸಮಾಧಾನವಿರುವುದಿಲ್ಲ" ಎಂದು ಪಕ್ಕದ ಕೊಠಡಿಗೆ ಸರಿದು ಬಾಗಿಲು ಮುಚ್ಚಿ ದೀಪ ಹಚ್ಚಿಸಿ ಮೇಜಿನ ಬಳಿಗೆ ಬಂದರು. ಅದರ ಮೇಲೆ ದತ್ತೂ ರಾಯರಿಗೆ ಬರೆದ ಕಾಗದವಿದ್ದಿತು. ಈ ಕಡೆ ದತ್ತೂರಾಯರಿಂದ ಬಂದ ಕಾಗದ ತೆರೆದಿಟ್ಟಿದೆ. ಎದುರಿಗೆ ಕತೆಗಾರನ ಹಿಂದಿನ ಸಂಚಿಕೆ. ಅದರಲ್ಲಿ, 'ಬರುವ ಸಂಚಿಕೆಯಲ್ಲಿ ರಾಮರಾಯರ "ಏನಿದು ಹುಚ್ಚು" ಎಂಬ ಕತೆ ಪ್ರಕಟಿಸಲಾಗುತ್ತೆ. ಎಲ್ಲರೂ ನಿರೀಕ್ಷಿಸುವುದು' ಎಂದಿದೆ. ಬರೆಯುವ ಕಾಗದದಲ್ಲಿ 'ಶ್ರೀ' ಮತ್ತು ಕತೆಯ ಹೆಸರು. ಕತೆ ಬರೆದಿರಲಿಲ್ಲ. ಎಲ್ಲಾ ನೋಡಿದರು. ತಮ್ಮ ಯಜಮಾನರ ಕತೆ ಬರುತ್ತದೆ ಎಂದ ಮೇಲೆ ಓದುಗ ರೆಲ್ಲರೂ ಎಷ್ಟು ಆತುರದಿಂದಿರುತ್ತಾರೆ ಎಂಬದನ್ನು ಊಹಿಸಿದರು. ತಾವೇ ಅವರ ಕತೆಗಳನ್ನು ಎಷ್ಟು ಆತುರದಿಂದ ಆದರದಿಂದ ಓದುತ್ತಿದ್ದರೆಂಬುದು ಅನುಭವಕ್ಕೆ ಬಂದಿದೆ. ಅಷ್ಟು ಜನರ ಆಸೆಗೆ ವಿಘ್ನವನ್ನೊದಗಿಸಿದೆನಲ್ಲಾ ಎಂದು ಅವರ ಮನಸ್ಸು ನೊಂದಿತು. ದತ್ತೂರಾಯರಿಗೆ ಬರೆದಿಟ್ಟಿದ್ದ ಕಾಗದವನ್ನು ಓದಿ ನೋಡಿದರು. ಇನ್ನು ತಮ್ಮ ಯಜಮಾನರು ಕೊಟ್ಟ ಮಾತಿಗೆ ತಪ್ಪಬೇಕಾದ್ದು ಬೇರೆ. ಅದರಿಂದ ಸಂಭವಿಸಬಹುದಾದ ಅವಮಾನ ವೆಲ್ಲಾ ಅವರ ಕಣ್ಣೆದುರಿಗೆ ಕಟ್ಟಿದ ಹಾಗಾಯಿತು. ಹೆಂಗಸರೆಷ್ಟಾದರೂ ಭಾವನಾಲೋಲರು; ಅದರಲ್ಲಿಯೂ ಸೀತಮ್ಮನವರು! "ನಾನೇನು ಮಾಡಿಬಿಟ್ಟೆ" ಎಂದು ಹಾಗೇ ಕುಳಿತುಬಿಟ್ಟರು.

ರಾಮು ಅವಸರದಲ್ಲಿ ಮನೆಗೆ ಬಂದುದು—ಅರೆ ಊಟ—ನೆಪದ ಸಂಧ್ಯಾವಂದನೆ—ಬರೆಯಲು ಕುಳಿತುದು—ಮಗು ಬಂದುದು—ತಾನು ಕೊಠಡಿಗೆ ಬಂದು ಕಾದಿದ್ದುದು..................ಎಲ್ಲಾ ನಿಧಾನವಾಗಿ ಒಂದಾಗುತಲೊಂದು ಕಣ್ಮುಂದೆ ಬಂದು ನಿಲ್ಲಲಾರಂಭಿಸಿದವು.

ಏನೋ ಹೊಳೆಯಿತು. "ಆಗಲಿ ನೋಡೋಣ, ದೇವರಿದ್ದಾನೆ" ಎಂದು ಸರಿಯಾಗಿ ಕುಳಿತರು. ಕೈಗೆ ಲೇಖನಿಯನ್ನು ತೆಗೆದುಕೊಂಡರು. ಪುನಃ ಬರೆಯುವ ಕಾಗದದ ಕಡೆ ನೋಡಿದರು. ಅದರ ಮೇಲೆ 'ಶ್ರೀ' ಮತ್ತು ಕತೆಯ ಹೆಸರಿದೆ. ಕತೆಯನ್ನಿವರು ಬರೆಯಲಾರಂಭಿಸಿದರು. ಆ ದಿನದ ಆಂದೋಳನದಿಂದ ಮನಸ್ಸು ಪರಿಪಕ್ವವಾಗಿತ್ತು. ಬರೆಯುತ್ತಾ ಕುಳಿತರು, ಸಣ್ಣಗೆ ಕೊರೆಯತೊಡಗಿದರು. ಒಂದೆರಡು ಗಂಟೆಯಲ್ಲಿ ಕತೆಯು ಪೂರೈಸಿತು. ಆರು ಪುಟಗಳು! ಸರಿಯಾಗಿ ಮಡಿಸಿ ದತ್ತೂರಾಯರಿಗೆ ಬರೆದ ಕಾಗದವನ್ನು ಹರಿದುಹಾಕಿ ಆ ಲಕ್ಕೋಟೆಯಲ್ಲಿಯೇ ಇದನ್ನು ಇರಿಸಿ ಅಂಟಿಸಿದರು.

ಈ ವಿಚಾರವನ್ನು ಪತಿಗೆ ಈಗಲೇ ಬಿನ್ನವಿಸುವುದೇ? ನೋಡಿದರು. ತಮ್ಮ ಪತಿ ಗಾಢನಿದ್ರೆಯಲ್ಲಿದ್ದಾರೆ. ತೊಂದರೆಪಡಿಸಬಾರದು, ಎಂದು ತಾವೂ ಮಲಗಿದರು.

ಮೊದಲು ನಿದ್ರೆ ಬರಲಿಲ್ಲ. ಪರೀಕ್ಷೆ ಮುಗಿದ ದಿನ ನೀವು ರಾತ್ರಿಯನ್ನು ಹೇಗೆ ಕಳೆಯುತ್ತೀರೋ ಅದನ್ನೇ ಅನುಭವಿಸಿದರು. ನಿಮಗೆ "ಚೆನ್ನಾಗಿ ನಿದ್ರೆಮಾಡಿಬಿಡಬೇಕು. ಎಲ್ಲವೂ ತೀರಿಹೋಯಿತು" ಎಂದು ಮನಸ್ಸು. ಆದರೆ ನಿದ್ರೆಮಟ್ಟಿಗೆ ಬರುವುದಿಲ್ಲ. ಬೆಳಗಿನ ಜಾವದಲ್ಲಿ ನಿದ್ರೆಹತ್ತಿತು. ಸುಷುಪ್ತಾವಸ್ಥೆ!

ಸೀತಮ್ಮನವರು ಏಳುವ ಹೊತ್ತಿಗೆ ರಾಮು ಎದ್ದು ಹಾಸಿಗೆ ಬಟ್ಟೆ ಕಟ್ಟಿ ಜಟಕಾದಲ್ಲಿ ಹಾಕಿಸಿ, ಪೀರೂಗೆ ಆ ಕಾಗದವನ್ನು ತೆಗೆದುಕೊಂಡು ಹೋಗಿ ದತ್ತೂರಾಯರಿಗೆ ಕೊಟ್ಟುಬಿಡುವಂತೆ ಹೇಳಿ ಹೊರಗೆ ಹೊರಟ

ದ್ದನು. ಸೀತಮ್ಮನವರು ಅಂದಿನ ರಾತ್ರಿಯ ವಿಚಾರವನ್ನು ತಿಳಿಸಲು ನಸುನಗೆಯಿಂದ ಹೊರಕ್ಕೆ ಬಂದರು. ರಾಮು ವಾಗಲೇ ಜಟಕಾ ಹತ್ತಿದ್ದನು. “ಇನ್ನು ಎಂಟು ದಿವಸಕ್ಕೆ ಬರುತ್ತೇನೆ” ಎಂದು ಹೇಳಿ ಹೊರಟುಬಿಟ್ಟನು.

× × × ×

ಎಂಟು ದಿನಗಳಾದವು. ಈ ದಿನ ಸಾಯಂಕಾಲದ ರೈಲಿನಲ್ಲಿ ರಾಮು ಬರುತ್ತಾನೆಂದು ನಾನೂ, ವೆಂಕಟೇಶಯ್ಯ ಇಬ್ಬರೂ ಸ್ಟೇಷನ್ನಿಗೆ ಬಂದಿದ್ದೆವು. ರೈಲು ಬಂತು. ರಾಮು ಇಳಿದೊಡನೆಯೇ “ಏನು ರಾಮು, ನಮಗೇನು ಹೇಳಬಾರದಾಗಿತ್ತೋ! ನಿನ್ನ ಈ ಸರ್ತಿ ಕತೆ ಅಷ್ಟಿಷ್ಟಲ್ಲ. ಬಲು ಸ್ವಾರಸ್ಯವಾಗಿದೆ. ನಿನ್ನ ಇತರ ಕತೆಗಳನ್ನೆಲ್ಲಾ ಅಡ್ಡಡ್ಡವಾಗಿ ನುಂಗುತ್ತೆ” ಎಂದು ಹೇಳಿದೆವು. ರಾಮೂಗೆ ಪೆಚ್ಚುಮುಖ ಬಿತ್ತು. “ಬಂದದ್ದೆಲ್ಲಾ ಬರಲಿ, ಅನುಭವಿಸುವುದು. ಆದರೆ ತಮ್ಮ ಆಪ್ತಮಿತ್ರರೇ ಈ ರೀತಿ ಗುಲ್ಲೆಬ್ಬಿಸುತ್ತಾರೆಂದು ತಿಳಿದಿರಲಿಲ್ಲ” ಎಂದುಕೊಂಡನು.

ಅವನಿಗಾಗಿಯೇ ಹೋಗಿದ್ದ ನಮ್ಮೊಡನೆ ಸರಿಯಾಗಿ ಸಹಿತ ಮಾತನಾಡಲಿಲ್ಲ. ಜಟಕವೊಂದನ್ನು ಮಾಡಿಕೊಂಡು ಬೇಗ ಮನೆಗೆ ಬಂದುಬಿಟ್ಟ. ನೇರವಾಗಿ ತನ್ನ ಕೊಠಡಿಗೆ ಹೋಗಿ ರುಮಾಲನ್ನು ಸಣ್ಣ ಮೇಜಿನ ಮೇಲೆಸೆದು ಅಂಗಿಯನ್ನು ತೆಗೆದು ಗೂಟಕ್ಕೆ ತಗಲಿಹಾಕಿ ಷರಾಯನ್ನು ಬಿಚ್ಚಲು ಬರೆಯುವ ಮೇಜಿನ ಬಳಿಯಿದ್ದ ಕುರ್ಚಿಯ ಮೇಲೆ ಬಂದು ಕುಳಿತು, ಒಂದೊಂದಾಗಿ ಗುಂಡಿಯನ್ನು ಬಿಚ್ಚತೊಡಗಿದ.

ಮೇಜಿನ ಮೇಲೆ ಆ ತಿಂಗಳ ಕತೆಗಾರ ಇತ್ತು. “ಅವರು ಏನು ಮಾಡಿ ಬಿಟ್ಟಿದ್ದಾರೋ, ತಾನು ಬರೆದಿದ್ದ ಕಾಗದವನ್ನೇ ಪ್ರಕಟಿಸಿಬಿಟ್ಟಿದ್ದಾರೇನೋ” ಎಂದು ನೋಡಲು ಕೈಗೆ ತೆಗೆದುಕೊಂಡನು. ಮುಖಪುಟದ ಮೇಲೆ ಆ ಸಂಚಿಕೆಯಲ್ಲಿ ಬಂದಿರುವ ಉತ್ಕೃಷ್ಟವಾದ ಕತೆಯ ಹೆಸರು, ಅದನ್ನು ಬರೆದವರು, ಸಂಪಾದಕರ ಅಭಿಪ್ರಾಯ ಇಷ್ಟು ಇರುವುದು ವಾಡಿಕೆ. ನೋಡುತ್ತಾನೆ, ದಪ್ಪದಪ್ಪ ಅಕ್ಷರಗಳಲ್ಲಿ—

# “ಏನಿದು ಹುಚ್ಚು!”

**ರಾಮರಾಯರಿಂದ,—**

ಈ ತರಹದ ಕತೆಯನ್ನು ಇದುವರೆಗೆ ಯಾರೂ ಬರೆದಿಲ್ಲ. —ಸಂ.

ಎಂದಿತ್ತು.

ಇವನಿಗೆ ಆಶ್ಚರ್ಯ ! ಕೌತುಕ !! ಒಳಗೆ ಏನಿದೆ ನೋಡಬೇಕೆಂದು ತೆಗೆದು ಓದುತ್ತಾನೆ. ಅದರಲ್ಲಿ ಎಂಟು ದಿವಸಗಳ ಹಿಂದೆ ಇದೇ ಕೊಠಡಿಯಲ್ಲಿ ಜರುಗಿದ ವಿಚಾರ. ಅದನ್ನು ನಿರೂಪಿಸಿರುವ ರೀತಿಯೋ ! ಮೊದಲು ಮಾಡುವಾಗಲೇ ಎಷ್ಟು ಚೆನ್ನಾಗಿದೆ ಗೊತ್ತಾಗುತ್ತೆ. ಈ ರೀತಿ ಆರಂಭ.

“ಏನಿದು ಹುಚ್ಚು, ಇವತ್ತು ಎಂಟುಗಂಟೆ ಹತ್ತುನಿಮಿಷ ಆರು ಸೆಕೆಂಡಿಗೆ ಕತೆಯನ್ನು ಬರೆಯುತ್ತೀನಿ ಎಂದು ಕುಳಿತಿರೇ ! ಸ್ಫೂರ್ತಿ ಅವರ ಸೇವಕಳೇ ? ಹೆಂಡತಿಯೊಡನೆ ಜಬರುದಸ್ತು ಮಾಡುವಂತೆ ಅವಳಲ್ಲಿ ಆಗುತ್ತದೆಯೇ...” ಎಂದಿದೆ.

ಹಾಗೇ ತಿರುವಿ ಹಾಕಿದನು. ಕೊನೆಗೆ ಶ್ರೀ. ಹೊಯಸಳರ ಪದ್ಯ.

ಫಣೆಗೆ ಚಂದಿರ ರೇಖೆ-
ಯಣಿಯಾಗಿ ತಿದ್ದಿಟ್ಟು
ಮಣಿರಮಣಿ ತಾರೆಯೊಲು
ಮಿಣಕುದೀಪವ ಹಚ್ಚಿ
ಕ್ಷಣಗಳನು ಇರುಳೆಲ್ಲ
ಎಣಿಸುತ್ತ ಕುಳಿತಿರಲು—

* * *

ಘನಘನೋಪಾಧಿಗಳ
ತನ ಬುದ್ಧಿಯಿಂ ಪಡೆದ

ಘನಶಾಸ್ತ್ರಪಂಡಿತನು
ತನಿಗಬ್ಬವೋದುತಲಿ
ಮನವ ತಾ ಮರೆತಿಹನು
ಮನವ ತಾ ಮರೆತಿಹನು
ಮನವ ತಾ ಮರೆತಿರುವನು.

ರಾಮು ಒಂದುದಿನ ಸೀತಮ್ಮನವರಿಗೆ ಇದನ್ನು ಓದಿ ಹೇಳಿದ್ದನು. ಅವರದನ್ನು ಕಲಿತು, ಆಗಾಗ ಇವನಿಗೆ ಹೇಳಿ ಅಣಕಿಸುತ್ತಿದ್ದರು. ಅದೇ ಇಲ್ಲಿದೆ. ಓದಿದನು. ಆನಂದಾತಿಶಯದಲ್ಲಿ ಮುಳುಗಿದನು. ಕೈಯಲ್ಲಿ ಹಾಗೇ ಪತ್ರಿಕೆಯನ್ನು ಹಿಡಿದುಕೊಂಡು ಎದ್ದನು. ಷರಾಯನ್ನು ಅರ್ಧ ಬಿಚ್ಚಿದ್ದಾನೆ. ಒಳಗಿನ ಪಾಯಿಜಾಮೆ ಕಾಣುತ್ತಿದೆ. ಹಾಗೆ ಅದನ್ನು ಮೇಲಕ್ಕೆ ಎಳದು ಹಿಡಿದುಕೊಂಡು ಒಳಕ್ಕೆ ಹೋದನು.

ಸೀತಮ್ಮನವರು ಹಾಲಿನಲ್ಲಿ ಏನೋ ಕೆಲಸದಲ್ಲಿದ್ದರು. ರಾಮೂನ ಕಂಡಡೊನೆಯೇ ಆಶ್ಚರ್ಯದಿಂದ ಎದ್ದು ನಿಂತರು. ರಾಮುವಿನ ಕೈಯಲ್ಲಿ 'ಕತೆಗಾರ.' ಅದನ್ನು ಕಂಡು ಇವರ ಮುಖದಲ್ಲಿ ಮುಗುಳುನಗೆ ಮೂಡಿತು.

ಏನೇ, ನೀನೇನೆ ಈ ಕತೇನ ಬರೆದಿದ್ದು. ....ಆಂ.. ನಿನ್ನಲ್ಲಿಷ್ಟು ಶಕ್ತಿ ಅಡಕವಾಗಿದೆಯೆಂದು ನಾನು ಕನಸಿನಲ್ಲಿಯೂ ನೆನಸಿರಲಿಲ್ಲ. ಹಳ್ಳಿಯ ಹುಡುಗಿ ಎಂದುಕೊಂಡಿದ್ದೆ. ಸದ್ಯಕ್ಕೆ ನನ್ನ ಮಾನಾನ ಉಳಿಸಿದೆ...ಎಲ್ಲಿ.... ಎಂದು ಇನ್ನೂ ಹತ್ತಿರಕ್ಕೆ ಸರಿದು ಅವರ ಮುಂದಲೆಯನ್ನು ಎತ್ತಿದನು.

ಸೀತಮ್ಮನವರ ಮುಖದಲ್ಲಿ ಅಲ್ಲಿಯ ವರೆಗೂ ಅಡಕವಾಗಿದ್ದ ಸಗು ಉಕ್ಕಿ ಬಂತು. "ಏನಿದು ಹುಚ್ಚು !" ಎಂದುಬಿಟ್ಟರು. ಹಿಂತಿರುಗಿ ಅವನು ನೋಡಿದರೆ ನಾವೂ ಅಲ್ಲಿದ್ದೇವೆ !

---

# ಮಾಗಡಿ ರಂಗ



ಹೋದ ಶನಿವಾರ ಕಚೇರಿಯಿಂದ ಬರುತ್ತಾ ಮಾರ್ಕೆಟ್ಟಿಗೆ ಹೋಗಿ ಹೋಗೋಣವೆಂದು ದೊಡ್ಡಪೇಟೆಯ ಮೇಲೇ ಬಂದೆ. ದೊಡ್ಡಪೇಟೆ ಚೌಕದ ಇನ್ನೂ ಈಚೆಗೇ ವೈಶ್ಯರ ಛತ್ರವೊಂದಿದೆ. ಅಲ್ಲಿ ದಿನಬೆಳಗೂ ಏನಾದರೂ ಒಂದು ಮುಂಜಿಯೋ, ಮದುವೆಯೋ, ಕೊನೆಗೆ ಸಮಾರಾಧನೆಯೋ ಆಗುತ್ತಲೇ ಇರುತ್ತದೆ. ಸರಿ, ಆ ಛತ್ರದ ಮುಂದೆ ಊಂಡೆಲೆಗಳ ರಾಶಿ. ನಾನಲ್ಲಿಗೆ ಬರುವ ಹೊತ್ತಿಗೆ ಅಲ್ಲೊಂದು ದೊಡ್ಡ ಜಗಳ ನಡೆಯುತ್ತಿತ್ತು. ಸುತ್ತಲೂ ಜನಗಳು ನಿಂತುಕೊಂಡು ತಮಾಷೆ ನೋಡುತ್ತಿದ್ದರು. ನಾನೂ ಅಲ್ಲಿ ಏನು ನಡೆಯುತ್ತಿದೆ ನೋಡೋಣವೆಂದು ಹೋದೆ. ನನ್ನ ಜೊತೆಯವರು "ಅದೇನ್ರಿ ಅದು, ಬನ್ನಿ ಹೋಗೋಣ, ದಾರೀಲಿ ಹೋಗೊ ಮಾರಮ್ಮ ಮನೇಗೆ ಬಂದು ಹೋಗು ಎನ್ನೋ ಹಾಗೆ ನೀವೇ ನಲ್ಲಿ ಆಮಂತ್ರಣ ಇಕ್ಕೋದಕ್ಕೆ ಹೊರಟಿರಿ" ಎಂದು ತಡೆದರು. ಆದರೂ ಅವರನ್ನು ಲೆಕ್ಕಿಸದೆ ಯಾರು ಏನಾದರೂ ಅಂದುಕೊಳ್ಳಲಿ ಎಂದುಕೊಂಡು ಜನಸಂದಣಿಯಲ್ಲಿ ನುಗ್ಗಿ ಅಲ್ಲಿ ನಡೆಯುತ್ತಿದ್ದ ಜಗಳವನ್ನು ಬಿಡಿಸಲು ಹೋದೆ. ಅಲ್ಲಿ ನಾಲ್ಕೈದು ಜನ ಘಟಂಗರು ಎಳೆಯ ಹುಡುಗನೊಬ್ಬನನ್ನು ಹೊಡೆದು ಕೊಂದುಹಾಕುತ್ತಿದ್ದರು. ನಾನು ಬಿಡಿಸುವುದಕ್ಕೆ ನುಗ್ಗಿದ ಮೇಲೆ ಎಲ್ಲರೂ ನನ್ನ ಸಹಾಯಕ್ಕೆ ಬಂದರು. ನಮ್ಮ ಹಿಂದುಗಳಲ್ಲಿ ಅದೊಂದು ಗುಣ ನೋಡಿ, ತಮ್ಮ ಮುಂದೆನೇ ದೊಡ್ಡ ದೊಡ್ಡ ಅನಾಹುತಗಳು ನಡೆಯುತ್ತಿದ್ದರೂ ನೋಡುತ್ತಾ ಹಲ್ಲು ಗಿರಿಯುತ್ತಾ ಇರುತ್ತಾರೆಯೇ ಹೊರತು ಯಾರಾದರು ಇತರರು ಮುಂದೆ ನುಗ್ಗುವ ವರೆಗೂ ಯಾರೂ ಅಡ್ಡಿ ಮಾಡಲು ಹೋಗುವುದೇ ಇಲ್ಲ. ಅನಾಹುತ ವಿಷಯವೊಂದೇ ಅಲ್ಲ; ಎಲ್ಲಾ ವಿಷಯಗಳಲ್ಲಿಯೂ ಹಾಗೆಯೇ. ಆದುದರಿಂದಲೇ ಅವರಷ್ಟು ಪ್ರಾಪಂಚಿಕ ವ್ಯವಹಾರದ ವಿಷಯದಲ್ಲಿ ಹಿಂದುಳಿದಿರುವುದೆಂದು ಕಾಣುತ್ತೆ.

ಅದೇನು ವಾಜ್ಯ ಅಲ್ಲಿ ನಡೆಯುತ್ತಿತ್ತು ಅಂದರೆ, ಅಲ್ಲಿ ಆ ಹುಡುಗ ನನ್ನು ಹೊಡೆಯುತ್ತಿದ್ದ ಆ ಘಟಿಂಗರೆಲ್ಲಾ ಆ ಛತ್ರದ ಎಂಜಲನ್ನದ ಹಕ್ಕು ದಾರರಂತೆ. ಅವರ ಕೆಲಸ ಆ ಉಚ್ಛಿಷ್ಟಾನ್ನವನ್ನು ಣ್ಣುವುದು, ಎಂಜಲು ಬೀಡಿಗಳನ್ನು ಕುಡಿಯುವುದು, ಅಂಗಡಿ ಅಂಗಳಗಳಲ್ಲಿ ಮಲಗುವುದು. ಅವ ರಿಗೆ ಅಲ್ಲಿ ಶೇಷವೆಲ್ಲಾ ಸರ್ವಮಾನ್ಯವೆಂಬ ದುರಭಿಮಾನ. ಆ ದಿನ ಅವರು ' ದಿವಾನ ರಂಗ ' ನಂತೆ ನಿಧಾನವಾಗಿ ಬರುವ ಹೊತ್ತಿಗೆ ಹುಡುಗ ಬಂದು ತನಗೆ ಬೇಕಾದಷ್ಟು ತಿಂದು ಒಂದಷ್ಟು ಬೇರೆ ಗಂಟು ಕಟ್ಟಿಕೊಂಡು ಹೊರಟಿದ್ದನಂತೆ. ಅದಕ್ಕೇ ಅವರು ಅವನ ಮೇಲೆ ಸೇಡು ತೀರಿಸಿ ಕೊಳ್ಳುತ್ತಿದ್ದರು.

ನಾನು ಅವನನ್ನು ಬಿಡಿಸಿದ ಮೇಲೆ ಅವನು ನನ್ನ ಬೆನ್ನ ಹಿಂದೆಯೇ ಬಂದ. ಇತರ ನಾಯಿಗಳ ಕೈಗೆ ಸಿಕ್ಕಿ ಕಚ್ಚಿಸಿಕೊಳ್ಳುತ್ತಿದ್ದ ಕುಂಟ ನಾಯೊಂದನ್ನು ಬಿಡಿಸಲು ಬಿಡಿಸಿದಾತನನ್ನು ಅದು ಎಡೆಬಿಡದೆ ಅನುಸರಿಸು ವಂತೆ ಅವನು ನನ್ನ ಹಿಂದೆಹಿಂದೆಯೇ ನಡೆದುಕೊಂಡು ಬರುತ್ತಿದ್ದ. ಅವನು ಅಲ್ಲೇ ಇದ್ದರೆ ಎಲ್ಲರು ಅವನ ಮುಗ್ಗಲುಮರೆ ಹುಯ್ದು ಬಿಡು ತ್ತಾರೆಯೋ ಎಂಬ ಭೀತಿಯು ಇದ್ದಿರಬೇಕು. ನಾನು ಹಿಂತಿರುಗಿ ನೋಡಿ " ಏನೋ, ನೀನಿರೋದು ಎಲ್ಲೋ ? " ಎಂದು ಕೇಳಿದೆ.

" ಬಸವನ ಗುಡೀಲಿ, ಸ್ವಾಮಿ. "

" ಬಸವನ ಗುಡಿಯಲ್ಲಿ ಎಲ್ಲಿ ?"

" ಬಸವನ ಗುಡೀಲಿ ಸಿದ್ದರಾಮಣ್ಣನೋರ ಛತ್ರ ಐತಲ್ಲಾ ಅಲ್ಲಿ ಮಲಗಿಕೋತೀನಿ, ಸ್ವಾಮಿ."

" ನಿನ್ನ ಕೆಲಸವೂ ಆ ಛತ್ರದಲ್ಲಾಗುವ ಮದುವೆಗಳಲ್ಲಿ ಎಂಜಲನ್ನ ತಿಂದುಕೊಂಡು ಅಲ್ಲಿ ಬಿದ್ದುಕೊಂಡಿರುವುದೋ ? "

" ಅಲ್ಲ ಸ್ವಾಮಿ, ಎಂಜಲನ್ನಕ್ಕೆ ಕೈಯಿಕ್ಕಿದ್ದು ಇವತ್ತೇ ಸ್ವಾಮಿ. "

" ಇನ್ನೇನು ಕೆಲಸ ನಿಂದು ? "

" ಈಗೇನೂ ಕೆಲಸ ಇಲ್ಲ ಸ್ವಾಮಿ, ಅವತ್ತಿನಿಂದ ಅದನ್ನೇ ಹುಡು ಕುತಾ ಇದ್ದೀನಿ."

" ಕೆಲಸ ಇಲ್ಲಾ ಅಂದರೆ ಏನೋ? ಮಾಡುವವನಿಗೆ ಎಷ್ಟು ಕೆಲಸ ಇಲ್ವೋ ? "

" ನೀವೇನೋ ಸಲೀಸಾಗಿ ಹಾಗೆ ಅಂದು ಬಿಡುತೀರಿ, ಸ್ವಾಮಿ. ಕೆಲಸ ಹುಡುಕೋರಿಗೆ ಆ ಕಷ್ಟ ಗೊತ್ತು. ಈಗ ಒಂದು ತಿಂಗಳಿಂದಲೂ ಒಂದು ಕಚೇರಿ ಬಿಟ್ಟಿಲ್ಲ, ಒಂದು ಅಂಗಡಿ ಬಿಟ್ಟಿಲ್ಲ, ಒಂದು ಫಾಕ್ಟರಿ ಬಿಟ್ಟಿಲ್ಲ ಸ್ವಾಮಿ, ಎಲ್ಲಿ ಹೋದರೂನೂ ಏನೂ ಇಲ್ಲ ಎನ್ನಿಸಿಕೊಂಡು ಹಿಂತಿರುಗುವುದೇ ಆಗಿದೆ ಸ್ವಾಮಿ, ನನ್ನ ಹಣೆಬರಹ. ಈ ಸಲ ನಾನಿಲ್ಲಿಗೆ ಬಂದಲಾಗಾಯಿತು ನನ್ನ ನೆಂಟರಿಷ್ಟರು ಒಬ್ಬರಲ್ಲಾ ಒಬ್ಬರ ಮನೆಯಲ್ಲಿ ಇದ್ದಿದ್ದು ಆಯಿತು. ಯಾರು ತಾನೆ, ಎಷ್ಟು ದಿನ ತಾನೆ ಹಾಕುತಾರೆ ಸ್ವಾಮಿ ? ನಾನು ಒಬ್ಬನೇನಾ, ನನ್ನ ಜೊತೇಲಿ ನನ್ನ ತಂಗಿ ಬೇರೆ ಒಬ್ಬಳು ಅವ್ಳೆ. ಈ ಎರಡು ಮೂರು ದಿನಗಳಿಂದ ನಮ್ಮಿಬ್ಬರಿಗೂ ಹೊಟ್ಟೇಗೇ ಇಲ್ಲ. ಇವತ್ತು ನಾನು ಹಿಂದೆ ಇದ್ದೆನಲ್ಲಾ ಪ್ರೆಸ್ಸು, ಅಲ್ಲಿಗೆ ಹೋಗಿ ಸಂಜೆವರಿಗೂ ಅಲ್ಲಿ ಕಾದಿದ್ದು ಅಲ್ಲೂ ಇಲ್ಲ ಅನ್ನಿಸಿಕೊಂಡು ಹಿಂತಿರುಗುತ್ತಿದ್ದೆ. ಹೊಟ್ಟೆ ಬಹಳ ಹಸೀತಿತ್ತು ಸ್ವಾಮಿ, ಅಲ್ಲಿ ಆ ಛತ್ರದ ಮುಂದೆ ಬಿದ್ದಿದ್ದ ಎಂಜಲು ರಾಶೀನ ಕಂಡೆ. ದೇವರು ಕೊಡೋನಿಗೆ ಕೊಡುತಾನೇ ಇರುತಾನೆ ಸ್ವಾಮಿ; ಇಲ್ಲದೋನಿಗೆ ಇಲ್ವೇ ಇಲ್ಲ. ಅಲ್ಲಿ ನಾಯಿಗಳು ಕೂಡ ಸ್ವಾಮಿ, ಚೆನ್ನಾಗಿ ತಿಂದು ತೇಗುತ್ತಿದ್ದವು. ನನ್ನ ಬಾಳು ಆ ನಾಯಿಗಳಿಗಿಂತ ಕಡೆ ಆಗಿತ್ತು ಸ್ವಾಮಿ, ಆ ನಾಯಿಗಳನ್ನ ಓಡಿಸೋದಕ್ಕೆ ಹೋದರೆ ಅವು ನನ್ನ ಮೇಲೆ ತಿರುಗಿ ಬಿದ್ದು ಬಿಟ್ಟರೆ! ಅವು ತಿಂದು ತಿಂದು ತೋಳದ ಹಾಗೆ ಇದ್ದವು. ಅವುಗಳು ತಿಂದು ತೇಗಿ ಹೋಗುವವರಿಗೂ ಅಲ್ಲೇ ಕಾದಿದ್ದು ಅವುಗಳು ಹೋದ ಮೇಲೆ ನಾನೂ ಇಷ್ಟು ತಿಂದು, ಅವಳಿಗೆ ಅಷ್ಟು ಕಟ್ಟಿಕೊಂಡು ಹೊರಟೆ. ಅಷ್ಟರಲ್ಲಿ ಅದರ ವಾರಸ್ತುದಾರರು, ಅವರು ಅಲ್ಲಿ ಬಂದುಬಿಟ್ಟರು, ಸ್ವಾಮಿ. ಪಾಪಿ, ಸಮುದ್ರದಲ್ಲಿ ಮುಳುಗೋಣ ಅಂತ ಹೋದರೂನೂ ಮೊಣಕಾಲುದ್ದಾನೇ ಇತ್ತಂತೆ ನೀರು."

ಅವನು ಹೇಳಿದ್ದನ್ನೆಲ್ಲಾ ನಿಧಾನವಾಗಿ ಕೇಳಿದೆ. ಅಯ್ಯೋ ಎನ್ನಿಸಿತು. 'ಹೊಟ್ಟೇ ನಿನ್ನಿಂದ ನಾನು ಕೆಟ್ಟೆ' ಎನ್ನೋ ಹಾಗೆ ಮನುಷ್ಯ ಎಲ್ಲಿಗೆ ಇಳಿದು ಬಿಡಬೇಕು! " ಹಿಂದೆ ಯಾವ ಪ್ರೆಸ್ಸಿನಲ್ಲಿದ್ದೆ? " ಎಂದು ಕೇಳಿದೆ.

" ಹಿಂದೆ ಪ್ರೆಸ್ಸಾಯಿತು, ಸ್ವಾಮಿ, ಫಾಕ್ಟರಿ ಆಯಿತು, ಕಾಫಿ ಕ್ಲಬ್ಬು ಗಳೂ ಆಯಿತು. ನಾನು ಬಹಳ ಚಿಕ್ಕವನಿದ್ದಾಗಲೇ ಈ ಊರಿಗೆ ಬಂದು ಬಿಟ್ಟೆ. ಬಂದೋನು ಮೊದಲು ಕಬ್ಬನ್ ಪಾರ್ಕಿನಲ್ಲಿ ಕಾಫಿ ಕ್ಲಬ್ಬಿನಲ್ಲಿ ಸೇರಿಕೊಂಡು ಕೆಲಸ ಮಾಡುತ್ತಿದ್ದೆ. ಒಂದು ದಿವಸ ಅಲ್ಲಿ ಜನಗಳ ಗಲಾಟೆ ಬಲೇ ಜಾಸ್ತಿ ಇತ್ತು. ಅವತ್ತಲ್ಲಿ ಬ್ಯಾಂಡಿತ್ತು ಸ್ವಾಮಿ, ಆದರಿಂದ ಕ್ಲಬ್ಬಿ ನಲ್ಲೂ ಜನಗಳು ತುಂಬಿ ಹೋಗಿದ್ದರು. ಎಲ್ಲರೂ " ಇಲ್ಲಿ ಕ್ಲೀನು ಮಾಡ್ರಿ, ಇಲ್ಲಿ ಕ್ಲೀನು ಮಾಡ್ರಿ " ಎಂದು ಕೂಗುತ್ತಿದ್ದರು. ಅದಕ್ಕೆ ಯಜಮಾನರು ನನ್ನ ಮೇಲೆ ಕೂಗಾಡೋದಕ್ಕೆ ಷುರು ಮಾಡಿದರು. ಆ ಗಲಾಟೇಲಿ ಒಂದು ಕಪ್ಪು ಕೆಳಗೆ ಬಿದ್ದು ಬಿಡ್ತು ಸ್ವಾಮಿ, ಒಡೆದು ಹೋಯ್ತು. ಆಗ ಯಜಮಾನರು ಬಂದಿದ್ದೇ ನನ್ನ ಚೆನ್ನಾಗಿ ಕದುಕಿ ಬಿಟ್ಟರು, ಸ್ವಾಮಿ. ಕಾಲುಃಕಾಲಲ್ಲೇ ಒದ್ದುಬಿಟ್ಟರು. ಕೆಳಗೆ ಬಿದ್ದುಬಿಟ್ಟೆ. ಆಗ ಮಹರಾಯರು, ಸೋಪು ಫಾಕ್ಟರಿ ಚಿಕ್ಕ ಯಜಮಾನರು ಅಲ್ಲಿ ಕಾಫಿ ಕ್ಲಬ್ಬಿಗೆ ಬಂದಿದ್ದರು. ಅವರು ಬಂದು ನನ್ನ ಬಿಡಿಸಿ, ನನ್ನ ಸಂಗತಿ ವಿಚಾರಿಸಿ ತಮ್ಮ ಫಾಕ್ಟರೀಲಿ ಒಂದು ಕೆಲಸ ಮಾಡಿಸಿ ಕೊಟ್ಟರು."

" ಓಹೋ ಸೋಪು ಫಾಕ್ಟರೀಲಿ ! "

" ಹೌದು, ಸ್ವಾಮಿ, ಅಲ್ಲಿ ಎಲ್ಲರೂ ನನ್ನ ಕಂಡರೆ ಬಹಳ ವಿಶ್ವಾಸ ವಾಗಿದ್ದರು. ಹಾಗೇ ನಡೀತಿತ್ತು ಸ್ವಾಮಿ. ಆದರೆ ಯಾರೋ ಮಹರಾಯರು ಫಾಕ್ಟರಿಗಳಲ್ಲಿ ಹುಡುಗರಿಗಿಂತ ಹುಡುಗೀರನ್ನ ಕೆಲಸದ ಮೇಲೆ ನೇಮ್ಕ ಮಾಡಿದರೆ ಕೆಲಸ ಇನ್ನೂ ಚೆನ್ನಾಗಿ ನಡೀತೈತೆ ಅಂತ ನಮ್ಮನ್ನೆಲ್ಲಾ ಕಿತ್ತು ಹಾಕೋದಕ್ಕೆ ಆರ್ಡರು ಮಾಡಿದರು. ನಮ್ಮನ್ನೆಲ್ಲಾ ಕಿತ್ತು ಹಾಕಿ ಬಿಟ್ಟರು ಸ್ವಾಮಿ, ಇನ್ನು ಹೊಟ್ಟೆ ಮೇಲೆ ಕಲ್ಲು ಬಿತ್ತು ಅಂತಿದ್ದೆ. ಆದರೆ ಅಲ್ಲಿನ ದೊಡ್ಡ ಯಜಮಾನರೂನ ಸ್ವಾಮಿ, ನಮ್ಮ ಅಪ್ಪನೋರು, ಅವರನ್ನ ಒಂದು ಸಲ ಹೋಗಿ ನೋಡಿದೆ. ಒಡನೇನೆ ಅವರ ಸ್ನೇಹಿತರಿಗೆ ಕಾಗದ ಬರೆದು ಕೊಟ್ಟು ಸಿಫಾರಸು ಮಾಡಿ ಪ್ರೆಸ್ಸಿನಲ್ಲಿ ಕೆಲಸ ಮಾಡಿಸಿ ಕೊಟ್ಟರು."

" ಅದನ್ನ ಯಾಕೆ ಬಿಟ್ಟೆ ? "

" ಅಲ್ಲಿ ಸ್ಟ್ರೈಕು ಅಂತ ಆಯಿತು ಸ್ವಾಮಿ, ಅದು ಯಾಕೆ ಅನ್ನೋದು ನನಗೇ ಗೊತ್ತಿಲ್ಲ. ಸ್ಟ್ರೈಕು ಆದಾಗ ಎಲ್ಲಾ ಕೆಲಸದಿಂದ ನಿಂತುಬಿಡಬೇಕು

ಅಂತ ಮಾಡಿದರು. ಪ್ರೆಸ್ಸಿನ ಒಳಕ್ಕೆ ಹೋದೋರ ಕಾಲ್ನ ಮುರಿದು ಬಿಡುತೀನಿ ಅಂತಂದ್ರು. ನಾವೂ ನಿಂತುಬಿಡಬೇಕಾಯಿತು. ಅಷ್ಟರಲ್ಲಿ ನಮ್ಮ ಹಳ್ಳಿಯಲ್ಲಿ ನಮ್ಮ ತಂದೆ ತೀರಿಕೊಂಡ್ರು ಅಂತ ಹಳ್ಳೀಯಿಂದ ಹೇಳಿ ಕಳುಹಿಸಿ ಬಿಟ್ರು. ಅಲ್ಲಿಗೆ ಹೋಗಿ ಬಿಟ್ಟೆ. ಹಿಂತಿರುಗಿ ಬರೋ ಹೊತ್ತಿಗ್ಗೆ ಯಾರು ಯಾರು ನಮ್ಮನ್ನ ಕೆಲಸದ ಮೇಲೆ ಹೋಗಬೇಡಿ ಅಂತ ಅಡ್ಡಿ ಮಾಡಿದ್ದರೋ ಅವರೇ ಹೋದರಂತೆ, ಸ್ವಾಮಿ. ನಾನು ಕೆಲಸ ಕೇಳೋದಕ್ಕೆ ಹೋದೆ. ಡಿಸ್‌ಮಿಸ್ ಮಾಡಿದ್ದೀವಿ ನಿನ್ನ, ಆಗೋದಿಲ್ಲ ಅಂತ ಹೇಳಿಬಿಟ್ಟರು, ಸ್ವಾಮಿ."

"ನಿನ್ನ ತಂದೆ ಈಚೆಗೆ ತೀರಿಕೊಂಡರು ಅಂತ ಅಂದೆಯಲ್ಲಾ, ನಿನ್ನ ತಂದೆ ಇರೋವಾಗಲೇ, ಆ ಚಿಕ್ಕ ವಯಸ್ಸಿನಲ್ಲೇ ನೀನೊಬ್ಬನೇ ಇಲ್ಲಿಗೆ ಕೆಲಸಕ್ಕೆ ಯಾಕೆ ಬಂದೆ ?"

"ಆ ವಿಚಾರ ಹೇಳೋದಕ್ಕೆ ಹೋದರೆ ಬಹಳ ಹೊತ್ತು ಹಿಡೀತದೆ ಸ್ವಾಮಿ."

"ಏನು ಅಂಥ ವಿಚಾರ ಅದು ? ಹೇಳು ಕೇಳಿಬಿಡೋಣ."

"ನಮ್ಮ ತಂದೆ ತೀರಿಹೋದ್ರು ಅಂತ ಹೇಳಿದೆನಲ್ಲಾ ಸ್ವಾಮಿ, ಅದಕ್ಕೆ ಮುಂಚೇನೇ ನಮ್ಮ ತಾಯಿ ತೀರಿಕೊಂಡು ಬಿಟ್ಟಿದ್ದರು. ಅವಳು ಪುಣ್ಯ ಮಾಡಿದ್ದಳು, ಸ್ವಾಮಿ. ಅದಕ್ಕೇ ಬೇಗ ತೀರಿಕೊಂಡಳು. ನಮ್ಮ ತಂದೆ ಹತ್ತಿರ ಬಲು ಕಷ್ಟ ಅನುಭವಿಸಿದಳು ಸ್ವಾಮಿ."

"ಯಾಕೆ ನಿಮ್ಮ ತಂದೆ ಅಷ್ಟು ಅಯೋಗ್ಯನಾ ?"

"ಅಯ್ಯೋ, ಸ್ವಾಮಿ, ಕೇಳಿ ಹೇಳ್ತೀನಿ. ನಮ್ಮ ಹಿಂದಿನೋರಿಗೆ ಬಹಳ ಆಸ್ತಿ ಇತ್ತಂತೆ. ಒಂದೆರಡು ಸಂಸಾರಕ್ಕೆ ಆಗೋ ಅಷ್ಟು ದವಸ ಬರುತ್ತಿತ್ತಂತೆ. ಅದು ನಮ್ಮ ಅಪ್ಪನ ಕೈಗೆ ಸಿಕ್ಕಿದ್ಮೇಲೆ ಎಲ್ಲಾ ಹ್ಯಾಗೆ ಹ್ಯಾಗೆ ಹೋಯ್ತೋ, ಕೊನೆಗೆ ನಮ್ಮ ಗತಿ ಹೀಗಾಯ್ತು."

"ಏನು ಎಲ್ಲಾ ಪೋಲು ಮಾಡಿಬಿಟ್ಟನೋ !"

"ತರಲೆ ವ್ಯಾಜ್ಯಗಳನ್ನು ಕಟ್ಟಿಕೊಂಡು ಹೋದರೆ ಎಲ್ಲಿಗೆ ಕೊನೆ ಸ್ವಾಮಿ, ಸಾಲದಕ್ಕೆ ಅವನಿಗೆ ಒಬ್ಬಳು ಸೂಳೆ ಬೇರೆ."

"ಸರಿ, ಸರಿ."

" ನನ್ನ ಕೇಳಿದರೆ ಪಟ್ಟಣದ ಸಮಾನ ಇಲ್ಲ ಅಂತೀನಿ ಸ್ವಾಮಿ. ಯಾವ ಹಳ್ಳೀಗೆ ಹೋಗಿ ನೋಡಿ, ಅಲ್ಲಿ ಪಾರ್ಟಿಗಳು ಇಲ್ಲದೇ ಇರೋದೇ ಇಲ್ಲ. ಛಲ ತೀರಿಸಿಕೊಳ್ಳೋದಂತೆ ಛಲ, ಮಣ್ಣಾಂಗಡ್ಡೆ. ತನಗಂತೂ ಸಂಪಾದಿಸೋ ಯೋಗ್ತೆ ಇಲ್ಲ. ಇದ್ದಿದ್ದೂ ಹಾಳು ಮಾಡಿಬಿಟ್ಟ. "

" ಯಾಕೆ, ಎಷ್ಟಾದರೂ ನಿಮ್ಮ ತಂದೆ ಅವನು, ಅವನ ಮೇಲೆ ಅಷ್ಟು ಯಾಕೆ ರೇಗುತಿ ? "

" ಅವನು ನಮ್ಮ ತಂದೆ ಅಂತೆ ತಂದೆ ! ನಮ್ಮ ತಾಯೀನ ಎಷ್ಟು ಗೋಳು ಹುಯ್ದುಕೊಂಡು ಬಿಟ್ಟ ಸ್ವಾಮಿ. ನಮ್ಮ ತಾಯಿ ಮನೆಗೆ ಬಂದ ಮೇಲೆ ಅವಳಿಗೆ ಬೇಗ ಮಕ್ಕಳಾಗಲಿಲ್ಲವಂತೆ. ಅದಕ್ಕೆ ಅವನು ದಿನಾಗಲೂ ಮನೇಗೆ ಬರೋದು, ' ನಿನಗೆಲ್ಲೆ ಆಗುತ್ತೆ ಮಕ್ಕಳು ' ಅಂತ ಕಾಲು ಕಾಲಲ್ಲೇ ಒದೆಯೋದು. ಅವನ ಯೋಗ್ಯತೇಗೆ ಮಕ್ಕಳು ಬೇರೆ ಬೇಕಾಗಿತ್ತು ! ನಮ್ಮ ಅಮ್ಮ ಪ್ರತಿವಾರವೂ ಮಾಗಡಿ ರಂಗ, ಮಕ್ಕಳ ರಂಗನಿಗೆ ಹರಿಕೆ ಹೊತ್ತು ನನ್ನ ಹೆತ್ತಳು. ಆದರೂ ಅವನ ಕಿರುಕುಲ ಕಡಮೆ ಆಯ್ತೇ ? ಗುಡೀಗೆ ಹೋಗ್ತಾ ಇದ್ದಳಲ್ಲಾ ಅದಕ್ಕೆ ಇನ್ನೇನೋ ಹೆಸರಿಟ್ಟನಂತೆ. ಒದೆಗಳೂ ಬೈಗಳೂ ಇನ್ನೂ ಜಾಸ್ತಿ ಆಯ್ತು. ಅದರ ಜೊತೆಗೆ ಮನೋರೋಗ. ಇನ್ನೊಂದು ವರ್ಷಕ್ಕೆ ಇನ್ನೊಬ್ಬಳನ್ನು ಹೆತ್ತಳು. ಬಾಣಂತೀನ ನೋಡಿಕೊಳ್ಳೋರಿಲ್ಲ. ಯಾರು ನೋಡಿಕೊಬೇಕು ಸ್ವಾಮಿ, ಅವನಿಗೆ ಬೇಕಿಲ್ಲ. ಮನೇಗೆ ಇನ್ಯಾರು ಇದ್ದಾರೆ ? ಬಾಣಂತಿ ಜಾಡ್ಯದಲ್ಲೇ ಹೋದಳು. ತೀರಿಕೊಂಡು ಬಿಟ್ಟಳು ಸ್ವಾಮಿ. ಅವನು ಹೋಗಿದ್ದೇ ಸ್ವಸ್ಥವಾಗಿ ಸೂಳೆಮನೆ ಸೇರಿಬಿಟ್ಟ. ಇನ್ನು ನಮ್ಮನ್ನು ಯಾರು ನೋಡಿಕೊಳ್ಳಬೇಕು ? ಆವಾಗ ನಮ್ಮ ಅಜ್ಜಿ, ನನ್ನ ತಾಯಿಯ ತಾಯಿ ಮಗೂನ ಕರೆಕೊಂಡು ಹೋದಳು, ಸಾಕೋದಕ್ಕೆ ನನ್ನನ್ನೂ ಆ ಮೇಲೆ ಎರಡು ವರ್ಷಗಳ ವರಿಗೂ ಇಟ್ಟುಕೊಂಡಿದ್ದಳು. ಅವಳಿಗೂ ನಮ್ಮನ್ನ ಸಾಕೋದಕ್ಕೆ ಎಲ್ಲಿಂದ ಬರಬೇಕು ? ಮುದುಕಿ ಕೈಲಿ ಕೂಲಿ ನಾಲಿ ಮಾಡೋಕೆ ಆದಾತಾ ? ಅದಕ್ಕೆ ನಾನು ಇಲ್ಲಿ ಪಟ್ಟಣಕ್ಕೆ ಬಂದುಬಿಟ್ಟದ್ದು. ಮೊನ್ನೆ ನಮ್ಮ ಅಪ್ಪ ತೀರಿಕೊಂಡ ಅಂತ ತಿಳಿದಾಗ ಊರಿಗೆ ಹೋದೆ. ಎಲ್ಲಾ ಸರಿಮಾಡಿ ಬರೋಣ ಅಂತ. ನನ್ನ ಗ್ರಹಚಾರಕ್ಕೆ ನನ್ನ ಅಜ್ಜೀನೂ

ತೀರಿಕೊಂಡ್ಲು. ಅಲ್ಲಿಂದೆಲ್ಲಾ ಆಬಾದು ಮಾಡಿ ನನ್ನ ತಂಗೀನೂ ಕರಕೊಂಡು ನಾನೀಗ ಇಲ್ಲಿಗೆ ಬಂದೆ ಸ್ವಾಮಿ."

ಅವನು ಇಷ್ಟನ್ನೂ ಹೇಳಿ ಮುಗಿಸುವ ಹೊತ್ತಿಗೆ ನಾವು ಮಾರ್ಕೆಟ್ಟು ಸೇರಿ ಅದರ ಮುಂದೆ ಮಾತನಾಡುತ್ತಾ ಹತ್ತು ನಿಮಿಷಗಳ ಮೇಲೇ ನಿಂತು ಬಿಟ್ಟಿದ್ದೆವೆಂದು ಕಾಣುತ್ತೆ.

"ಈಗ ಕೆಲಸ ಇಲ್ಲವಲ್ಲಾ ಏನು ಮಾಡುತ್ತಿ?" ಎಂದು ಕೇಳಿದೆ.

"ಏನು ಮಾಡೋದು ಸ್ವಾಮಿ, ಸುಮ್ಮನೆ ಇರೋದಕ್ಕೆ ಆಗ್ತೈತೇನು. ಹುಡುಕುತೀನಿ, ನನಗೇನೋ ಧೈರ್ಯ ಐತೆ ಸ್ವಾಮಿ, ಹುಟ್ಟಿಸಿದ ದೇವರು ಹುಲ್ಲು ನೀರು ಕೊಡದೆ ಇರುತಾನಾ? ಕೊಟ್ಟೇ ಕೊಡುತಾನೆ."

"ಅಲ್ಲೋ ನಿನ್ನ ಹುಟ್ಟಿಸಿದ ನಿಮ್ಮ ಅಪ್ಪನೇ ಹೀಗೆ ಮಾಡಿದ ಅಂತ ಹೇಳ್ತಿದ್ದೀ, ಇನ್ನು ಕಣ್ಣಿಗೂ ಕಾಣಿಸದೆ ಇರೋ ಆ ದೇವರು ಏನು ಮಾಡುತ್ತಾನೋ?"

"ಹಾಗೆನ್ನಬೇಡಿ ಸ್ವಾಮಿ. ಹೋಗಲಿ ಸ್ವಾಮಿ, ನೀವು ಯಾಕೆ ಸ್ವಾಮಿ, ನನ್ನ ವಿಚಾರನ ಇಷ್ಟು ಕೇಳಿ ವಿಚಾರಿಸಿಕೊಂಡ್ರಿ? ಈ ಪ್ರಪಂಚ ದಲ್ಲಿ ಇಷ್ಟು ಅನ್ಯಾಯ ನಡೀತಿದ್ರೂ ಧರ್ಮ ಐತೆ ಸ್ವಾಮಿ, ಈಗ ಮೂರು ದಿನಗಳಿಂದ ನನಗೆ ಹೊಟ್ಟೆಗೆ ಇಲ್ಲದೇ ಇದ್ದರೂ ನಾನು ಖಂಡಿತವಾಗಿ ಹೇಳ್ತೀನಿ ಸ್ವಾಮಿ, ನಾನು ದೇವರನ್ನು ದೂರಲ್ಲ; ಪಾಪಕ್ಕೆ ಹೋಗೋಲ್ಲ. ಯಾರಾದರೂ ಪುಣ್ಯವಂತರು ಬರುತಾರೆ ನಮ್ಮನ್ನ ಉದ್ಧಾರ ಮಾಡುತ್ತಾರೆ."

"ಭಲಾ ಅಪ್ಪ!"

"ಇನ್ನು ನಾನು ಬರುತೀನಿ ಸ್ವಾಮಿ, ಬರಲೇ? ಬಲೇ ಕೊಂದರೆ ಕೊಟ್ಟು ಬಿಟ್ರಿ."

"ಬರ್ತೀನಿ ಸ್ವಾಮಿ" ಎಂದು ಅಲ್ಲಿಂದ ಹೊರಟ. ನಾನು ಅವನನ್ನು ಹಿಂದಕ್ಕೆ ಕರೆದು "ಏ ನಮ್ಮ ಮನೇನೂ ಬಸವನ ಗುಡೀಲೇ ಇದೆ. ಅಲ್ಲಿ ಯಾರನ್ನಾದರೂ ಕೇಳು, ನಮ್ಮ ಮನೆ ತೋರಿಸುತಾರೆ. ನಾಳೆ ಬೆಳಿಗ್ಗೆ ಬಂದು ನನ್ನ ಕಾಣು" ಎಂದು ಹೇಳಿ ಅವನನ್ನು ಕಳುಹಿಸಿಕೊಟ್ಟೆ.

ಮಾರ್ಕೆಟ್ಟಿನಿಂದ ಮನೆಗೆ ಬಂದರೂ ಆ ದಿನವೆಲ್ಲಾ ಅವನದೇ ಯೋಚನೆ. ಆ ಹುಡುಗನ ಸ್ಥೈರ್ಯ, ದೇವರಲ್ಲಿ ಅವನಿಗಿದ್ದ ನಂಬಿಕೆ,

ಬಡತನದ ಗೋಳು ಇವು ನನ್ನ ಮನಸ್ಸನ್ನು ಕಲುಕಿ ಬಿಟ್ಟಿದ್ದುವು. ಅವನಿಗೆ ಎಲ್ಲಾದರೂ ಒಂದು ಕೆಲಸ ಮಾಡಿಸಿ ಕೊಡಬೇಕು. ಎಲ್ಲಿ ಮಾಡಿಸಿ ಕೊಡಲಿ ? ರಾತ್ರಿ ಒಂದು ಕಡೆಯಿಂದ ಯೋಚಿಸುತ್ತಾ ಬಂದೆ. ನಮ್ಮವರು ಬಂದರು, ಅವರಿಗೆ ಅವನ ವಿಷಯವನ್ನೆಲ್ಲಾ ಹೇಳಿದೆ. ಅವರಿದ್ದುಕೊಂಡು "ಅವನ ತಂಗಿ ಅಂದರಲ್ಲಾ, ಅವಳು ಬೇಕಾದರೆ ನಮ್ಮ ಮನೇಲೆ ಗುಡಿ ಸೋದು ಗಿಡಿಸೋದು ಮಾಡಿಕೊಂಡಿರುತಾಳೆ. ಅವನಿಗೆಲ್ಲಾದರೂ ನೀವು ನೋಡ್ದಿ ಕೊಡಿಸಿ" ಎಂದರು.

ಬೆಳಿಗ್ಗೆ ಎಂಟು ಘಂಟೆ ಹೊತ್ತಿಗೆ ಅವನೂ ಬಂದ.

"ನಿನ್ನ ತಂಗೀನ ಬೇಕಾದರೆ ನಮ್ಮ ಮನೆಯಲ್ಲಿ ತಂದು ಬಿಡು. ನೀನು ಸಾಯಂಕಾಲಕ್ಕೆ ಬಾ. ನಿನ್ನ ಕೆಲಸದ ವಿಚಾರದಲ್ಲಿ ನಮ್ಮ ಸಾಹೇಬರ ಹತ್ತಿರ ಮಾತನಾಡಿರುತ್ತೇನೆ" ಎಂದೆ.

"ಆಗಲಿ ಸ್ವಾಮಿ, ನೀವು ಬಹಳ ತೊಂದರೆ ತೆಗೆದುಕೊಳ್ಳುತ್ತಿದ್ದೀರಿ" ಎಂದು ಹೇಳಿ ಹೊರಟು ಹೋದ.

ನನಗೆ ರಾತ್ರಿ ಒಂದು ಹೊಳೆದಿತ್ತು. ನಮ್ಮ ಸಾಹೇಬರ ಮನೆ ಮಾಲಿ ತೀರ ಮುದುಕ ಆಗಿ ಹೋಗಿದ್ದ. ಅವರ ಮನೇಲಿದ್ದ ಗಿಡಗಡ್ಡೆಗಳೆಲ್ಲಾ ಒಣಗಿ ಹೋಗಿ ಕಾಂಪೌಂಡಿನ ತುಂಬಾ ಲಂಟಾಣ ಹಬ್ಬಿತ್ತು. ನಮ್ಮ ಸಾಹೇಬರು 'ಅವನು ಬಹಳ ದಿವಸಗಳಿಂದ ಇರುವವನು' ಅಂತ ಅವನನ್ನು ಮಾತನಾಡಿಸದೆ ಹಾಗೇ ಇಟ್ಟುಕೊಂಡಿದ್ದರು. ಅವನಿಗೆ ಬೇರೆ ಅವರ ಕಾಂಪೌಂಡಿನಲ್ಲಿ ಬೇರೊಂದು ಮನೆಯನ್ನೂ ಕಟ್ಟಿಸಿ ಕೊಟ್ಟಿದ್ದರು. ಅದರಲ್ಲಿ ಆ ಮಾಲಿ, ಅವನ ಹೆಂಡತಿ ಇಬ್ಬರೇ ಇದ್ದವರು. ಅಂತೂ ಧರ್ಮದ ಕೂಳು ತಿನ್ನುತ್ತಾ ಇದ್ದಾರೆ ಎಂದು ನನಗೆ ಅನ್ನಿಸಿತ್ತು.

ಅವನು ಹೊರಟು ಹೋದ ಮೇಲೆ ನಾನು ನಮ್ಮ ಸಾಹೇಬರ ಮನೆಗೆ ಹೋಗಿ, ಅವರು ಖುಷಿಯಾಗಿ ಮಾತನಾಡುತ್ತಿರುವ ಕಾಲದಲ್ಲಿ ಆ ಮಾಲಿ ವಿಚಾರ ತೆಗೆದು, "ಇನ್ನು ಅವನನ್ನು ಇಟ್ಟುಕೊಂಡು ಪ್ರಯೋಜನವಿಲ್ಲ. ಕಾಂಪೌಂಡೆಲ್ಲಾ ಬೇಲಿಯ ಮಯವಾಗಿದೆ. ಇನ್ನು ಹಾವೂಹೊಟ್ಟರೆಗಳೆಷ್ಟು ಸೇರಿವೆಯೋ, ಮಕ್ಕಳೆಲ್ಲಾದರೂ ಆ ಕಡೆ ಓಡಾಡುತ್ತಿರುವಾಗ ಎಲ್ಲಿ ಅವುಗಳ ಬಾಯಿಗೆ ತುತ್ತಾಗುತ್ತವೆಯೋ ಎಂದು ಉದ್ಗಾರ ತೆಗೆದು

ಅವನ ತಪ್ಪನ್ನು ದ್ವಿಗುಣ ಮಾಡಿ ಅವನ ಬದಲು ಇನ್ನೊಬ್ಬ ಹುಡುಗ ಇದ್ದಾನೆ, ಅವನ ತಂಗಿ ಬೇರೆ ಇದ್ದಾಳೆ. ಅವರನ್ನು ಇಟ್ಟುಕೊಂಡರೆ ಸರಿಯಾಗಿ ನೋಡಿಕೊಂಡು ಹೋಗುತ್ತಾರೆ. ನಮ್ಮ ಕಡೆಯುವರು ಅವರು, ಸತ್ಯವಂತರು " ಎಂದು ಇವರ ಪರವಾಗಿ ವಾದಿಸಿದೆ.

" ಅದಕ್ಕೆ ಸಾಹೇಬರು " ಎಲ್ಲಪ್ಪಾ, ಅವರೀಗ ಇಪ್ಪತ್ತು ಇಪ್ಪತ್ತೈದು ವರ್ಷಗಳಿಂದ ಇದ್ದಾರೆ. ಪಾಪ, ಮುದುಕರು ಆದರು. ಈಗ ನಾವವರನ್ನು ಕಳುಹಿಸಿ ಬಿಟ್ಟರೆ ಎಲ್ಲಿಗೆ ಹೋಗುತ್ತಾರೆ. ನೀನು ಹೇಳೋದೇನೋ ನಿಜ. ಗಿಡಗಂಟಿ ಎಲ್ಲಾ ಹೋಯ್ತು. ಆದರೆ ಏನು ಮಾಡೋದಕ್ಕೆ ಆಗುತ್ತೆ ?" ಎಂದರು.

" ಹಾಗೆಂದರೇನು, ಸಾರ್. ಅವನು ಇದ್ದಷ್ಟು ದಿನವೂ ಸಂಬಳ ಕೊಡುತ್ತಿರಲಿಲ್ಲವೇ ? ಈಗಲೂ ಕೊಡುತ್ತಿರೋದೇ ಆಗಿದೆ. ಅವನಿಗೇನು ಖರ್ಚು ಇದ್ದಿದ್ದು, ಕೂಡಿಟ್ಟುಕೊಂಡಿದ್ದಾನೆ. ಇನ್ನು ಮೇಲೆ ಖರ್ಚು ಮಾಡಿಕೋತಾನೆ. ತಾವು ಯಾತಕ್ಕೆ ಅದಕ್ಕೋಸ್ಕರ ಅಷ್ಟು ಯೋಚನೆ ಮಾಡಬೇಕು ? " ಎಂದೆ. ಅದಕ್ಕೆ ಅವರು " ಆಗಲಿ, ನೋಡೋಣಪ್ಪ, ನಾಳೆ ನಿಮ್ಮ ಹುಡುಗನನ್ನು ಕಳುಹಿಸಿಕೊಡು " ಎಂದರು.

ಬೆಳಿಗ್ಗೇನೇ ಅವನನ್ನು ಕಳುಹಿಸಿಕೊಟ್ಟೆ. ಅವರು ಅವನನ್ನೆಲ್ಲಾ ವಿಚಾರಿಸಿ ಸಂಜೆಗೆ ಬರುವಂತೆ ಹೇಳಿದರಂತೆ. ಸಾಯಂಕಾಲ ಅವರನ್ನು ಕಂಡ ಮೇಲೆ ಬಂದು ನನಗೆ ಹೇಳು ಎಂದೆ.

ನಾನು ನಮ್ಮ ಸಾಹೇಬರ ಹತ್ತಿರ ಆಫೀಸಿನಲ್ಲಿ ಬೇರೆ ಅವನ ವಿಚಾರ ಎತ್ತಿದ್ದೆ. " ಆಗಲಿ ಅಪ್ಪ" ಎಂದಿದ್ದರು. ರೊಟ್ಟಿ ಜಾರಿ ತುಪ್ಪದೊಳಕ್ಕೇ ಬಿತ್ತು ಅಂದುಕೊಂಡಿದ್ದೆ. ರಾತ್ರಿ ಅವನು ನಮ್ಮ ಮನೆಗೇ ಬಂದ.

" ಏನೋ, ಒಪ್ಪಿದರೇನೋ, ಸೇರಿಸಿಕೊಂಡರೋ ! " ಎಂದು ಕೇಳಿದೆ.

" ಅವರೇನೋ ಒಪ್ಪಿಕೊಂಡರು ಸ್ವಾಮಿ. ಆದರೆ ? "

" ಏನು ಆದರೆ ? ಸಂಬಳ ಎಷ್ಟು ಕೊಡುತ್ತೀನಿ ಎಂದರು ? "

" ಸಂಬಳಾನು ಸರೀಗೆ ಕೊಡತೀನಿ ಅಂದರು ಸ್ವಾಮಿ...."

" ಇನ್ನೇನು ನಿನಗೆ? ಇರೋದಕ್ಕೆ ಮನೇನೂ ಕೊಡುತ್ತೀನಿ ಅಂದರೋ ಇಲ್ವೋ? "

" ನಾಳೇನೇ ನಿನ್ನ ತಂಗೀನ ಕರೆಕೊಂಡು ಮನೇಗೆ ಬಂದು ಬಿಡು. ಹಿಂದಿದ್ದೋನ್ನ ಬೆಳಗ್ಗೆ ಖಾಲಿ ಮಾಡಿಬಿಡುವಂತೆ ಹೇಳಿದ್ದೇನೆ'' ಅಂದರು.

" ಸರಿ, ನಾಳೆ ಬೆಳಿಗ್ಗೇನೆ ಹೊರಟು ಹೋಗು. ನಿನ್ನ ಅದೃಷ್ಟ ಚೆನ್ನಾಗಿತ್ತು. ಬೇಗ ಕೆಲಸ ಸಿಕ್ಕಿ ಬಿಡ್ತು."

" ಆದರೆ ನಾನು ಆ ಕೆಲಸದ ಮೇಲೆ ಹೋಗೋದಿಲ್ಲ, ಸ್ವಾಮಿ. "

ನನಗೆ ಆಶ್ಚರ್ಯವಾಯ್ತು.

" ಇನ್ನೇನು ನಿನಗೆ? " ಎಂದು ಕೇಳಿದೆ.

ಅವನು ಮಾತನಾಡಲಿಲ್ಲ. ಸುಮ್ಮನೆ ಇದ್ದ. ನನ್ನ ಮಾತಿಗೆ ನಾಹೇಬರು ಅಷ್ಟು ಗೌರವ ಕೊಟ್ಟರಲ್ಲಾ ಎಂದು ಹಿಗ್ಗಿ ಹೋಗಿದ್ದೆ. ಇನ್ನು ಇವನು ಕೆಲಸದ ಮೇಲೆ ಹೋಗದೆ ಹೋದರೆ ನನ್ನ ಗತಿ ಏನು? ನನಗೆ ರೇಗಿಹೋಯ್ತು.

" ದರಿದ್ರದವರು ನೀವು, ಆಗ ಕೆಲಸಕ್ಕೋಸ್ಕರ ಅಷ್ಟು ಅಲೆದಾಡಿದ್ದೇನು. ಈಗ ಹೋಗೋಲ್ಲ ಅನ್ನೋದೇನು. ನೀವು ಎಂಜಲನ್ನ ತಿಂದುಕೊಂಡಿರೋದಕ್ಕೇ ಲಾಯಕ್ಕು '' ಎಂದೆ.

ಅವನು ಆದರೂ ತಲೆ ತಗ್ಗಿಸಿಕೊಂಡೇ ಇದ್ದ.

" ಇನ್ನೇನು ನಿಂತಿದ್ದಿ, ನೀನು ಕೆಲಸ ಮೇಲೆ ಹೋಗೋದಕ್ಕೆ ಆಗದೆ ಹೋದರೆ ಹೊರಡು ಆಚೆ " ಎಂದು ಗದರಿಸಿದೆ.

ಅವನು ಮರುಮಾತಾಡದೆ ಹೊರಟುಬಿಟ್ಟ. " ಅವನು ಯಾತಕ್ಕೆ ಒಪ್ಪೋದಿಲ್ಲ ಅಂದ? ಅಲ್ಲಿ ಏನೋ ವಿಚಾರ ನಡೆದಿರಬೇಕು '' ಅಂದುಕೊಂಡು " ಇಲ್ಲಿ ಬಾರೋ ಇಲ್ಲಿ " ಎಂದು ಅವನನ್ನು ಕೂಗಿ ಕರೆದೆ. ಅವನು ಹಿಂತಿರುಗಿ ಬಂದ.

" ಯಾಕೋ ಹೋಗೋದಿಲ್ಲ? ಯಾರಾದರೂ ಏನಾದರೂ ಅಂದರೇನೋ? "

" ಏನೂ ಅನ್ನಲಿಲ್ಲ, ಸ್ವಾಮಿ. "

" ಹೇಳು, ಏನೂ ಭಯವಿಲ್ಲ,"

" ಇನ್ನೇನೂ ಇಲ್ಲ ಸ್ವಾಮಿ, ಒಬ್ಬರ ಹೊಟ್ಟೆ ಮೇಲೆ ಹೊಡೆದು ನನ್ನ ಹೊಟ್ಟೆ ತುಂಬಿಸಿಕೊಳ್ಳೋದಕ್ಕೆ ಯಾಕೋ ಮನಸ್ಸು ಬರಲಿಲ್ಲ ಸ್ವಾಮಿ."

ನನಗೆ ಸರಿಯಾಗಿ ಅರ್ಥವಾಗಲಿಲ್ಲ. ಅವನೇ ಹೇಳತೊಡಗಿದ.

" ಸಾಹೇಬರು ನಾಳೇನೆ ಮನೇಗೆ ಬಂದುಬಿಡು ಅಂದರಲ್ಲಾ ಸ್ವಾಮಿ, ನಾನೂ ಹೊರಟು ಬರುವಾಗ ಹಿತ್ತಲ ಕಡೆ ಗೇಟಿನಲ್ಲೇ ಬಂದೆ. ಬರುತ್ತಾ ನಾಳೆ ನಾನು ಬರಬೇಕಾದ ಮನೆ ಇನ್ನು ಮುಂದೆ ನಮ್ಮ ಮನೆ ಅಂದು ಕೊಂಡು ಅದರ ಹತ್ತಿರ ಬಂದೆ. ಅದರಲ್ಲಿ ಬೆಳಕು ಕಾಣುತ್ತಿತ್ತು. ಕಿಟಕೀಲಿ ಒಂದು ಸಲ ಆ ಮನೆ ಒಳಕ್ಕೆ ಬಗ್ಗಿ ನೋಡಬೇಕು ಅನ್ನಿಸಿತು. ಆ ಮೇಲೆ " ಆಗಲೇ ಎಷ್ಟು ಆಸೆ ಮನುಷ್ಯನಿಗೆ " ಅಂತ ತೋರಿತು. ಅಷ್ಟು ದೂರ ಮುಂದಕ್ಕೆ ಹೋದೆ. ತಿರುಗಿ ಹೋಗಿ ಕಿಟಕೀಲಿ ಒಂದು ಸಲ ಮಟ್ಟಿಗೆ ಇಣಿಕಿ ಬಿಟ್ಟು ಹೋಗೋಣ ಅಂತ, ಒಂದೇ ಸಲ ಅಂತ ಮನಸ್ಸಿಗೆ ತೋರಿತು. ಎಷ್ಟೆಷ್ಟೋ ಯೋಚಿಸಿದೆ. ಒಂದು ಸಲ ನೋಡಿದರೆ ಏನು ? ಹೇಗಿದ್ದರೂ ನಾಳೆಯಿಂದ ನನ್ನ ಮನೆ ಅದು, ಎಂದುಕೊಂಡು ಹಿಂತಿರುಗಿ ಬಂದು ಅದರ ಕಿಟಕಿಯಲ್ಲಿ ಇಣಿಕಿ ನೋಡಿದೆ. ನೋಡಿದ್ದು ಒಳ್ಳೇದೇ ಆಯಿತು."

" ಏನಾಯಿತು ಒಳ್ಳೇದು ! "

" ಇಣಿಕಿ ನೋಡಿದೆ– ಒಳಗಡೆ ಒಬ್ಬ ಮುದುಕ, ಒಬ್ಬ ಮುದುಕಿ, ಇಬ್ಬರೇ ಇದ್ದಿದ್ದು. ಮುದುಕ " ಇನ್ನು ನಾಳೆ ಈ ಮನೇನ ಬಿಟ್ಟುಬಿಡ ಬೇಕು....ಊ....ಆಗಲಿ. ಇನ್ನು ಎಲ್ಲಿಗೆ ಹೋಗೋದೋ....ನೋಡೋಣ" ಅಂತಿದ್ದ. ಅದಕ್ಕೆ ಮುದುಕಿ " ಇದೆಲ್ಲಾ ಆ ಶಕುನಿ ಇದ್ದಾನಲ್ಲಾ, ಸಾಹೇ ಬರ ಜೊತೆಯಲ್ಲೇ ಬರುತ್ತಾನಲ್ಲಾ ಅವನ ಕೆಲಸ. ಅವರ ಕಡೆಯವ ರಾರನ್ನೋ ಸೇರಿಸಬೇಕಂತೆ. ನಾನೇ ಹೋಗಿ ಅಮ್ಮಾವರ ಹತ್ತಿರ ಹೇಳಿ ಕಾಲು ಕಟ್ಟಿಕೊಳ್ಳುತ್ತೀನಿ" ಅಂದಳು. ಅದಕ್ಕೆ ಅವನು " ಯಾರು ತಾನೆ. ಏನು ತಾನೆ ಮಾಡುತಾರೆ ? ಇದು ಹಸೂನ ಕಟುಕರ ಬಾಯಿಗೆ ಕೊಡೋ ಹಾಗೆ. ಹಾಲಿದ್ದಾಗ ಚೆನ್ನಾಗಿ ಕರೆಸಿಕೊಂಡು ಬಿಡೋದು. ಮುದಿ ಯಾಯ್ತು ಅಂದರೆ ಕಟುಕರೋನಿಗೆ ಮಾರಿ ಬಿಡೋದು. ಕಟುಕರು

ಅದನ್ನು ತೆಗೆದುಕೊಂಡು ಹೋಗುತ್ತಿರುವಾಗ ಹಸುವೇನಾದರೂ ತಂಟೆ ಮಾಡಿದರೆ, ಮುಷ್ಕರ ಹಿಡಿದರೆ ಅದರ ಬೆನ್ನು ಮೇಲೆ ಒದೆ, ಗೊತ್ತೇ ಇದೆ ಯಲ್ಲಾ ಅಂತ ಹೇಳ್ತಿದ್ದ ಸ್ವಾಮಿ " ಎಂದು ಹೇಳಿ ನಿಲ್ಲಿಸಿದ.

ಅವನು ಆಗ ಹೇಳಿದ್ದೂ ಅರ್ಥವಾಗತೊಡಗಿತು. ಆ ಚಿತ್ರ ಕಣ್ಣೆದು ರಿಗೆ ಕಟ್ಟಿದಂತಾಯಿತು. ನಾನು ಮಾತನಾಡದೆ ಇರಲು ಅವನು ಅಲ್ಲಿಂದ ಸುಮ್ಮನೆ ಹೊರಟುಬಿಟ್ಟ. ಹಿಂತಿರುಗಿ ನೋಡಲೂ ಇಲ್ಲ, ಹಾಗೇ ಹೋಗು ತ್ತಿದ್ದ ಆ ಮಾಗಡಿ ರಂಗ.

" ನಾವು ಒಬ್ಬರಿಗೆ ಉಪಕಾರವನ್ನು ಮಾಡುವುದಕ್ಕೆ ಹೋಗಿ ಇನ್ನು ಯಾರಿಗೆ ಅನ್ಯಾಯ ಮಾಡುತ್ತಿದ್ದೇವೆ ಎನ್ನುವುದನ್ನು ಅವಗಾಹನೆಗೇ ತರು ವುದಿಲ್ಲವಲ್ಲ. ಇದಕ್ಕೂ ಸ್ವಾರ್ಥಕ್ಕೂ ಎಷ್ಟು ಇದೆ ಹಾಗಾದರೆ ಅಂತರ!

" ಇಲ್ಲ ಅವನು ನುಡಿದಿದ್ದು ಸತ್ಯ. ಆ ಹುಡುಗ ವಯಸ್ಸಿನಲ್ಲಿ ಚಿಕ್ಕವನಾದರೂ, ಜಾತಿಯಲ್ಲಿ ಮೇಲ್ತರಗತಿಯವನಲ್ಲದಿದ್ದರೂ ನಮ ಗಿಂತಲೂ ಎಷ್ಟೋ ಮೇಲು. ಅವನು ದಾರಿ ತಪ್ಪಿ ಹೋಗುವವನಲ್ಲ. ದೇವರು ಅವನನ್ನು ಕಾಪಾಡುತ್ತಾನೆ. ನಾವಿನ್ನೂ ಲೋಕವನ್ನು ನೋಡ ಬೇಕು. ಸಂಸ್ಕಾರ ಬೇಕು " ಎಂದುಕೊಂಡು ಹಾಗೆ ಆ ಮಾಗಡಿ ರಂಗನ ವಿಷಯಗಳನ್ನೆಲ್ಲಾ ಮೆಲಕು ಹಾಕುತ್ತಾ ಆರಾಮಕುರ್ಚಿಯನ್ನು ಆಶ್ರಯಿ ಸಿದೆ.

ನಮಗೂ ಆಶ್ರಯ ಬೇಕು ! ಇನ್ನು ಅವರಿಗೊ ? ಇದ್ದಾನೆ !

---

# ಕೊನೆಯ ಆಸೆ

ಈ ದಿನವೂ ಎಷ್ಟು ತಡೆದರೂ ಮನಸ್ಸು ನಿಲ್ಲದು; ಕೇಳಲಿಲ್ಲ. ಆ ಹುಚ್ಚು, ಆಸೆ, ಆದರ ಅಮಲು, ನಿನ್ನೆಯ ಅಮಲು. ನಿನ್ನೆಯೇ ನಾನು ಕುದುರೆಯ ಪಂದ್ಯಕ್ಕೆ ಹೋಗಿದ್ದುದು. ಅದು ಹೇಗೆ ಹೋದೆ ! ಅದು ಹೇಗೆ ಅಷ್ಟು ದುಡ್ಡನ್ನು ಗೆದ್ದೆ ! ನನ್ನ ಜೀವಮಾನದಲ್ಲಿ ಎಂದೂ ಯಾವ ಜೂಜಿಗೂ ಮನಸ್ಸನ್ನು ಎಳೆದಿದ್ದವನಲ್ಲ. ಯಾವ ಕುದುರೆಯು ಹೇಗೆ, ಯಾವುದರ ಲಕ್ಷಣ ಹೇಗಿರುವುದು, ಯಾವ ಯಾವವು ಯಾವ ಯಾವ ಸಲ ಪಂದ್ಯದಲ್ಲಿ ಗೆದ್ದಿದ್ದವು — ಇವು ಯಾವವೊಂದನ್ನೂ ನಾನರಿತವನಲ್ಲ. ಅದೊಂದು ಹುಚ್ಚು. ಆವೇಶವೇ ? ಅಲ್ಲ. ಅದು ಹೇಳಿದೆನಲ್ಲಾ ಅದೊಂದು ಅಮಲು. ಇನ್ನು ಅಷ್ಟು ದುಡ್ಡು ಸಂಪಾದಿಸಿದ್ದು ? ಅದು ನಸೀಬು.

ನಿನ್ನೆಯ ಹುಚ್ಚೇ ಈ ದಿನವೂ ನನ್ನನ್ನು ಅಲ್ಲಿಗೆ ಎಳೆದೊಯ್ದುದು. ಹೋದವನು ನಿನ್ನೆ ಸಂಪಾದಿಸಿದ್ದ ರೂಪಾಯಿಗಳೊಂದಿಗೆ ಇನ್ನೂ ಇಪ್ಪತ್ತು ರೂಪಾಯಿಗಳನ್ನು ಹೆಚ್ಚಾಗಿ ತೆಗೆದುಕೊಂಡು ಹೋದೆ. ಕಳೆದು:ಕೊಂಡೂ ಬಂದೆ. ಆದರೆ ನಾನು ಕಳೆದುಕೊಂಡ ದುಡ್ಡಿಗೆ ಅಷ್ಟು ವ್ಯಸನಪಡುವುದಿಲ್ಲ. ಕಳೆದುಕೊಂಡ ನಾಲ್ಕರಷ್ಟು ಸಂಪಾದಿಸಿಕೊಂಡೂ ಬಂದೆ. ಹಣವಲ್ಲ, ಹಣಕ್ಕಿಂತ ಅಧಿಕವಾದವು, ಅನುಭವ. ಅಲ್ಲಿ ಅನೇಕ ವಿಷಯಗಳು ತಿಳಿದು ಬಂದವು. ಮನಸ್ಸು ಎಷ್ಟೋ ಸಂಸ್ಕೃತವಾಯಿತೆಂದು ಹೇಳಲೇ. ಅಲ್ಲಿನ ನನ್ನ ಅನುಭವವೊಂದನ್ನು ಇಲ್ಲಿ ವರ್ಣಿಸುತ್ತೇನೆ. ಇದು ಜೂಜಿಗೆ ಸಂಬಂಧಪಟ್ಟದ್ದು. ನಿಮಗೆ ಬೇಸರವಾಗಬಹುದು. ಅದಕ್ಕೋಸ್ಕರ ಅದಷ್ಟು ಅದನ್ನು ಕೆಲಮಾತುಗಳಲ್ಲಿಯೇ ಮುಗಿಸಿಬಿಡುತ್ತೇನೆ. ತಮ್ಮಗಳಲ್ಲಿ ಅನೇಕರಿಗೆ ಜೂಜಿನ ಅನುಭವವಿಲ್ಲ. ಅದೂ ಒಳ್ಳೆಯದೇ. ಆದರೂ ಅಲ್ಲಿ ತಿಳಿದುಕೊಳ್ಳಬೇಕಾದುವು ಅನೇಕ ವಿಷಯಗಳಿವೆ. ಹೀಗೆಂದೊಡನೆಯೇ ನಾನು ನಿಮ್ಮನ್ನು ಅಲ್ಲಿಗೆ ಹೋಗಿ ನೋಡಿ, ಎಂದು ಹೇಳಿದೆನೆಂದು ತಿಳಿದು ಕೊಳ್ಳಕೂಡದು.

ನಮ್ಮಲ್ಲಿ ಕುದುರೆಯ ಜೂಜಿಗೆ ಹೋಗುವವರಲ್ಲಿ ಎರಡು ತರಗತಿಗಳಿವೆ. ಮೊದಲ ತರಗತಿಗೆ ಮುಕ್ಕಾಲು ಮೂರು ಪಾಲು ಆಂಗ್ಲೇಯರು ಮತ್ತು ಪಾರಶೀಯರೇ ಹೆಚ್ಚು ಮಂದಿ ಹೋಗುವವರು. ಬರೀ ಪ್ರವೇಶಕ್ಕೇ ಹತ್ತು ರೂಪಾಯಿಗಳನ್ನು ಕೊಡಬೇಕಾಗುವುದು. ಇನ್ನು ಜೂಜಿನ ಟಿಕೇಟುಗಳ ದರ ಕೇಳಬೇಕೇ. ಅವೂ ಅದಕ್ಕೆ ತಕ್ಕ ಹಾಗೆಯೇ ಇರುವುವು.

ಎರಡನೆಯ ತರಗತಿ—ಅದೇ ನಮ್ಮ ಹಿಂದುಗಳೆಲ್ಲರೂ ಕಲೆಯುವ ತರಗತಿ. ಪ್ರವೇಶದ ದರ ಎರಡು ರೂಪಾಯಿಗಳು ಮಟ್ಟಿಗೆ. ಒಂದು ತಿಳಿದುಕೊಳ್ಳಿ, ಕುದುರೆಯ ಪಂದ್ಯಕ್ಕೆ ಬರುವವರು ಬರೀ ಕುದುರೆಗಳು ಓಡುವುದನ್ನು ನೋಡುವುದಕ್ಕೇ ಅಲ್ಲ ಬರುವುದು. ಹಾಗೆ ಬರುವವರು ನೂರಕ್ಕೆ ಒಬ್ಬರಿರುತ್ತಾರೆಯೋ ಅದೂ ಇಲ್ಲವೋ. ಅವರೂ ಅಲ್ಲಿ ಜೂಜಿಗೆ ಇಳಿಯದೇ ಹಾಗೆ ಹಿಂತಿರುಗುತ್ತಾರೆಯೆಂದು ಮಟ್ಟಿಗೆ ನಾನು ಹೇಳಲಾರೆ. ಬರುವವರೆಲ್ಲರೂ ಜೂಜು ಆಡುವುದಕ್ಕೇ. ಅಲ್ಲಿಗೆ ಎಂತೆಂಥವರು ಬರುವವರೆಂದು ಹೇಳಲೇ. ನಾನು ಅಲ್ಲಿಗೆ ಹೋದಾಗ ಯಾರುಯಾರಲ್ಲಿ ಯಾವ ಯಾವ ಅಭಿಪ್ರಾಯಗಳಿದ್ದವೋ ಅವುಗಳೆಲ್ಲವೂ ಮಾಯವಾದವು. ದೊಡ್ಡ ದೊಡ್ಡ ಅಧಿಕಾರಿಗಳು ! ಘನವಿದ್ವಾಂಸರು ! ಅವರ ಹೆಸರುಗಳೆಲ್ಲವನ್ನೂ ಇಲ್ಲಿ ನಾನು ಹೇಳುತ್ತಾ ಹೋದರೆ ನೀವೆಂದಿಗೂ ನನ್ನನ್ನು ನಂಬುವುದಿಲ್ಲ. ಹೋಗಲಿ ಬಿಡಿ. ಇನ್ನು ಹೆಂಗಸರು ! ನಿಮಗೆ ಆಶ್ಚರ್ಯವಾಗಬಹುದು. ಮೆಣಸಿನ ಪುಡಿ ಮಾಡಿಕೊಡುವ ಮಡಿ ಹೆಂಗಸರು ! ಇನ್ನು ಏನು ಹೇಳಬೇಕು.

ಅಲ್ಲಿಗೆ ಬಂದವರು ಒಬ್ಬರನ್ನೊಬ್ಬರು ಮಾತನಾಡಿಸುತ್ತಾ ನಿಂತುಕೊಳ್ಳುವುದಿಲ್ಲ. ಪ್ರತಿಯೊಬ್ಬರೂ ತಾವು ಬಂದಿರುವುದು ಇತರರಿಗೆ ತಿಳಿಯದಂತಿರಲೆಂದು ಹಾಗಿರುವರೋ ನಾನು ಹೇಳಲಾರೆ. ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲನ್ನು ಕುಡಿಯುವಂತೆ ಅಲ್ಲವೆ ಅದು. ಅಥವಾ ಎಲ್ಲಿ ಯಾರನ್ನು ಮಾತನಾಡಿಸಿದರೆ ಯಾರು ಯಾವ ಹೊತ್ತಿನಲ್ಲಿ ಸಾಲವನ್ನು ಕೇಳಿಬಿಡುವರೆಂದೋ ! ಅಂತೂ ಪ್ರತಿಯೊಬ್ಬರೂ ತಮ್ಮ ತಮ್ಮ ಕೆಲಸಗಳಲ್ಲಿ ಆಸಕ್ತರಾಗಿರುತ್ತಾರೆ. ಇನ್ನು ಕಳ್ಳತನಕ್ಕೋಸ್ಕರ ಅಲ್ಲಿಗೆ ಬರುವವರೂ ಅಷ್ಟೆ. ಜೂಜಿನ ತಾನವು ಕಳ್ಳರ ಸುಳ್ಳರ ತವರುಮನೆಯೂ ಅಲ್ಲವೇ !

ನಾನು ಹೋಗುವ ಹೊತ್ತಿಗೆ ಆಗಲೇ ಪಂದ್ಯವು ಶುರುವಾಗಿದ್ದಿತು. ಒಂದು ಸಲ ಕುದುರೆಗಳು ಓಡಿಯೂ ಬಿಟ್ಟಿದ್ದವು. ನಾನು ಹೋದೊಡ ನೆಯೇ ಯಾವ ಯಾವ ಕುದುರೆಗಳು ಯಾವ ಯಾವ ಸಲ ಓಡುವುವೆಂಬ ಪಟ್ಟಿಯನ್ನು ತೆಗೆದುಕೊಂಡು ಟಿಕೀಟುಗಳನ್ನು ಕೊಳ್ಳುತ್ತಾ ಬಂದೆ. ಒಂದೊಂದು ಸಲಕ್ಕೆ ಕೊನೆಯ ಪಕ್ಷ ಎರಡು ಅಥವಾ ಮೂರು ಟಿಕೀಟು ಗಳನ್ನು ಕೊಳ್ಳುತ್ತಿದ್ದೆ. ಒಂದು ಸಲವಲ್ಲ; ನಾಲ್ಕು ಸಲವಾಯಿತು. ನನ್ನ ದುರದೃಷ್ಟ! ಎಲ್ಲವೂ ಹೋಯಿತು. ಅದು ಐದನೆಯ ಓಟ. ಈ ಸಲ ಯಾವ ನಂಬರಿಗೆ ಹಾಕಲಿ ಎಂದು ಯೋಚಿಸುತ್ತಾ ನಿಂತೆ. ಜೂಜಿನ ಕಟ್ಟೆ ಯಲ್ಲಿ ನಾನು ಹಿರಿಯ ನಾನು ಕಿರಿಯ ಎಂಬ ಭೇದಭಾವವೇ ಇರುವುದಿಲ್ಲ. ಅಲ್ಲಿ ಲಕ್ಷಾಧೀಶ್ವರರೂ ಒಂದೇ. ಬೀದಿಯಲ್ಲಿ ಅಲೆಯುವ ಬಿಕಾರಿಗಳೂ ಒಂದೇ. ಆ ಫರಂಗಿ ಸಿಪಾಯಿಗಳಿದ್ದಾರೆ ನೋಡಿ, ಹೊರಗಡೆ ಅವರನ್ನು ಹಿಡಿಯುವುದಕ್ಕೆ ಆಗುವುದಿಲ್ಲ. ಅಲ್ಲೋ ಅವರು ನಾಯಿಕುನ್ನಿಗಳು. ನೀವು ಯಾವ ನಂಬರಿಗೆ ಹಾಕಿದ್ದೀರಿ, ಎಂದು ಎಷ್ಟು ವಿನಯದಿಂದ ಬಂದು ಕೇಳುತ್ತಿರುತ್ತಾರೆಯೆನ್ನುವಿರಿ.

ಆದರೆ ನಾನೋ ಯಾವುದಕ್ಕೆ ಈ ಸಲ ಹಾಕಲಿ ಎಂದು ಒಂದೆಡೆ ಯೋಚಿಸುತ್ತಾ ನಿಂತಿದ್ದೆ. ಹಾಗೆ ನಿಂತಿರುವಾಗ ಹಿಂದೆ ಯಾರೋ ನನ್ನ ಭುಜವನ್ನು ಮುಟ್ಟಿದಂತಾಯಿತು. ಆ ಸ್ಪರ್ಶವೋ ಎಷ್ಟು ಮೃದುವಾದುದು! ಆದರೆ ಅದು ನನಗೆ ವಿದ್ಯುತ್‌ಶಕ್ತಿಯೊಡನೆ ಹೊಡೆದಂತಾಯಿತು. ಹಿಂತಿ ರುಗಿ ನೋಡಿದೆ. ಒಳ್ಳೆಯ ಮನೆತನದ ಹೆಂಗಸು! ಆ ಕ್ಷಣದಲ್ಲಿ ನಿಶ್ಚಯ ವಾಗಿಯೂ ನನ್ನ ಕಣ್ಣುಗಳನ್ನು ನಾನೇ ನಂಬದೆ ಹೋದೆ. ದೊಡ್ಡ ಮನುಷ್ಯರ ಹೆಂಗಸರು ಅಲ್ಲಿಗೆ ಬರುವುದೆಂದರೆ ಒಂದು ವಿಧ. ಇನ್ನು ಇತರ ತರಹದ ಹೆಂಗಸರಂತೂ ಬರುವುದು ಇದ್ದೇ ಇದೆ. ಈಕೆ! ಅವರ ಉಡು ಪಿನಲ್ಲಿ, ಮುಖದ ಲಕ್ಷಣದಲ್ಲಿ ಸಾಧಾರಣದ ನಮ್ಮ ತರಗತಿಗೆ ಸೇರಿ ದವರು. ಮಧ್ಯಮ ತರಗತಿಯವರು. ಆದರಲ್ಲಿಯೂ ಬ್ರಾಹ್ಮಣರಂತೆ ಇದ್ದಾರೆ. 'ಜೂಜಿನ ಕಟ್ಟೆಯಲ್ಲಿ ಏನೇನು ತಾನೆ ನಡೆಯುವುದಿಲ್ಲ' ಎಂದು ಕೊಂಡೆ.

ಅವರು ಮೃದುವಾಗಿ–" ನನಗೆ ಈ ನಂಬರುಗಳಿಗೆ ಎರಡು ಟಿಕೀಟು ಗಳನ್ನು ಕೊಂಡು ಕೊಡುವಿರಾ ? " ಎಂದರು.

ನಾನು " ಆಗಲಿ " ಎಂದು ಹೇಳಿ ನನ್ನದರ ಜೊತೆಗೆ ಅವರಿಗೂ ತಂದು ಕೊಟ್ಟೆ.

ಅವರ ಮಾತಿನಲ್ಲಿ ಯಾವ ಬಿಂಕ ಬಿನ್ನಾಣಗಳೂ ಕಾಣಲಿಲ್ಲ. ಅವರು ಯಾರಿರಬಹುದು ?

ನನ್ನದೂ ಹೋಯಿತು. ಅವರದೂ ಹೋಯಿತು.

ಅವರಿಗೆ ಹೇಳಿದೆ. ಅವರು ಅದಕ್ಕೇನೂ ಚಿಂತಿಸಲಿಲ್ಲ. ಪುನಃ ದುಡ್ಡನ್ನೂ ನಂಬರುಗಳನ್ನೂ ಕೊಟ್ಟು " ಈ ಸಲವೂ ಇವುಗಳಿಗೆ ತರುವಿರಾ ! " ಎಂದು ಕೇಳಿಕೊಂಡರು.

" ನಾನು ಯಾಕೆ, ನೀವೇ ಹೋಗಿ ಕೊಂಡುಕೊಳ್ಳಬಾರದೇನು ? " ಎಂದೆ.

ಅವರು " ಆ ಜನಸಂದಣಿಯಲ್ಲಿ ನಾನು ನುಗ್ಗಿ ಹೋಗಲಾರೆ. ನನಗೆ ಅಭ್ಯಾಸವಿಲ್ಲ. " ಎಂದರು.

ಹಾಗಾದರೆ ಯಾತಕ್ಕೆ ಇಲ್ಲಿಗೆ ಬಂದಿರೆಂದು ಕೇಳಬೇಕೆಂದಿದ್ದೆ. ಆದರೆ ಅವರ ಮುಖವನ್ನು ನೋಡಿದೆ. ಕೇಳಲು ಏಕೋ ಮನಸ್ಸು ಬರಲಿಲ್ಲ ಇವರು ಇದೇ ಇಲ್ಲಿಗೆ ಮೊದಲು ಸಲ ಬಂದಿರಬಹುದೇನೋ ಎಂದುಕೊಂಡೆ. ಮರುಮಾತನಾಡದೇ ಹೋಗಿ ಟಿಕೀಟುಗಳನ್ನು ಕೊಂಡುಕೊಂಡು ಬಂದೆ.

ಈ ಸಲವೂ ಇಬ್ಬರದೂ ಹೋಯಿತು.

ಪುನಃ ಅವರು ದುಡ್ಡನ್ನೂ ಕುದುರೆಗಳ ನಂಬರನ್ನೂ ತೆಗೆದು ಕೊಟ್ಟರು. ಅವರು ಇಷ್ಟು ಸ್ಥೈರ್ಯದಿಂದ ದುಡ್ಡನ್ನು ತೆಗೆದುಕೊಡ್ಡುತ್ತಿರುವುದನ್ನು ಕಂಡು ನನಗೆ ಆಶ್ಚರ್ಯವಾಯಿತು. ನನ್ನ ಮನಸ್ಸಿನಲ್ಲಿದ್ದ ಕುತೂಹಲವನ್ನು ಅವರೇ ಗ್ರಹಿಸಿ " ನಾನು ಯಾಕೆ ಇಲ್ಲಿ ಬಂದು ಹೀಗೆ ಖರ್ಚು ಮಾಡುತ್ತಿದ್ದೇನೆಂದು ತಮಗೆ ಆಶ್ಚರ್ಯವಾಗುತ್ತಿರಬಹುದು ? " ಎಂದು ಕೇಳಿದರು. ಆದರೆ ಅವರು ಕೇಳಿದ ರೀತಿಯಲ್ಲಿ ನಾನು ಏನನೂ ಹೇಳಲಾರದೆ ಹೋದೆ.

" ಏನೂ ಇಲ್ಲ " ಎಂದು ಬಿಟ್ಟೆ.

ಈ ಸಲವೂ ನಮ್ಮಿಬ್ಬರದೂ ಹೋಯಿತು.

ಇದೇ ಕೊನೆಯ ಓಟ. ನನ್ನಲ್ಲಿ ಐದು ರೂಪಾಯಿಗಳು ಮಟ್ಟಿಗೆ ಉಳಿದಿದ್ದವು. ಎರಡು ಟಿಕೀಟುಗಳಿಗೆ ಆಗುತ್ತದೆ. ಅವರು ಈ ಸಲವೂ " ನೋಡಿ ಇದೇ ಕೊನೆಯದು. ಇದಕ್ಕೂ ನೋಡಿಬಿಡೋಣವೆಂದು ಆಸೆಯಿದೆ. ಆದರೆ ನನ್ನಲ್ಲಿ ಉಳಿದಿರುವುದು ಇನ್ನು ಒಂದೇ ರೂಪಾಯಿ. ನೀವು ಇನ್ನೊಂದು ರೂಪಾಯನ್ನು ಸಾಲ ಕೊಟ್ಟರೆ ಅದರಲ್ಲಿ ಬಂದೇ ಬರುತ್ತೆ. ಬಂದಿದ್ದರಲ್ಲಿ ಇಬ್ಬರೂ ಹಂಚಿಕೊಳ್ಳೋಣ " ಎಂದು ಬಹಳ ವಿನಯದಿಂದ ಕೇಳಿದರು.

" ಏನು ! ಇಲ್ಲಿಯ ವರೆಗೂ ನಿಮಗೇನೂ ಬಂದೇ ಇಲ್ಲವೇ? ಮೊದಲಿನಿಂದಲೂ ಆಡುತ್ತಿಲ್ಲವೇ ನೀವು ? " ಎಂದೆ.

" ಮೊದಲಿನಿಂದಲೂ ಆಡುತ್ತಲೇ ಇದ್ದೇನೆ, ಆದರೆ ಅದೃಷ್ಟವಿಲ್ಲ."

" ಮೊದಲಿನಿಂದಲೂ ತಪ್ಪು ನಂಬರುಗಳಿಗೇ ಹಾಕುತ್ತಿದ್ದೀರಾ ? "

" ಇಗೋ ಈ ಈ ನಂಬರು ಕುದುರೆಗಳಿಗೆ ಹಾಕಿದೆ " ಎಂದು ಪಟ್ಟಿಯನ್ನು ಕೈಗೆ ಕೊಟ್ಟರು.

" ಹಾಗಿದ್ದರೆ ನಿಮಗೆ ಏನೂ ಇಲ್ಲವೆಂದಿದ್ದರೂ ಮೂವತ್ತು ರೂಪಾಯಿಗಳ ವರೆಗಾದರೂ ಮೊದಲೇ ಬಂದಿರಬೇಕಲ್ಲಾ " ಎಂದೆ.

ಅವರು ತಲೆಯೆತ್ತಿ ನನ್ನ ಮುಖವನ್ನೇ ನೋಡಿದರು.

ಇದೇ ಅವರು ಮೊದಲಸಲ ನನ್ನ ಮುಖವನ್ನು ನೋಡಿದುದು; ನಾನೂ ಅವರನ್ನು ಸರಿಯಾಗಿ ನೋಡಿದುದು. ಅವರ ಮುಖದಲ್ಲಿ ' ನೀವು ಹೇಳುತ್ತಿರುವುದು ನಿಶ್ಚಯವೇ ? ' ಎಂದು ಕೇಳುತ್ತಿರುವ ಭಾವವಿದ್ದಿತು.

ನಾನು ಅವರನ್ನೇ ನೋಡುತ್ತಿದ್ದೆ.

ಅವರು " ಇದುವರಿಗೆ ಟಿಕೀಟುಗಳನ್ನು ಕೊಂಡುಕೊಡಲು ಹೋಗುತ್ತಿದ್ದವರ ಪೈಕಿ ಹಿಂತಿರುಗಿ ಬಂದು ಅದು ಏನಾಯಿತೆಂದು ಹೇಳುತ್ತಿದ್ದವರು ನೀವೊಬ್ಬರೇ " ಎಂದರು.

" ಹಾಗಾದರೆ! ನೀವು ಯಾರಿಗೆ ಕೊಡುತ್ತಿದ್ದಿರೋ ಅವರನ್ನು ಸರಿಯಾಗಿ ವಿಚಾರಿಸುತ್ತಿರಲಿಲ್ಲವೇ ? "

" ಅವರು ಯಾವಾಗ ಹಿಂತಿರುಗುತ್ತಿರಲಿಲ್ಲವೋ ಆಗ ಅದು ಹೋಯಿತೇನೋ, ಅದಕ್ಕೇ ಅವರು ಬರಲಿಲ್ಲ ಎಂದುಕೊಳ್ಳುತ್ತಿದ್ದೆ."

ನಾನು ' ಚೆನ್ನಾಯಿತು ' ಎಂದುಕೊಂಡೆ.

ಹಾಗೆ ಆಗಲೆಂದು ಅವರು ಹೇಳಿದ ಕುದುರೆಯ ನಂಬರಿಗೆ ಒಂದು ಟಿಕೀಟು, ನಾನು ಎರಡು ಟೀಕೀಟುಗಳನ್ನು ಕೊಂಡುಕೊಂಡು ಬಂದ.

ಈ ಸಲ ನಮ್ಮ ಅದೃಷ್ಟ—ಅಲ್ಲ ಆಕೆಯ ಅದೃಷ್ಟ. ನನ್ನ ನಂಬರಿನ ಕುದುರೆಗಳೆರಡೂ ಹಿಂದೆ ಬಿದ್ದವು. ಅವರದು ಮೊದಲನೆಯದು. ಆ ನಂಬರಿಗೆ ಹದಿನೆಂಟೂವರೆ ರೂಪಾಯಿಗಳು ಬಂದವು. ನಾನು ಆ ಗೆದ್ದ ರೂಪಾಯಿಗಳನ್ನು ತೆಗೆದುಕೊಂಡು ಹೋಗಿ ಅವರ ಕೈಗೆ ಕೊಟ್ಟೆ. ಅವರಿಗಾಗ ಉಂಟಾದ ಸಂತೋಷವನ್ನು ಹೇಳತೀರದು. " ಇದೇ ಮೊದಲು ನಾನು ಗೆದ್ದ ಹಣವನ್ನು ತೆಗೆದುಕೊಳ್ಳುತ್ತಿರುವುದು " ಎಂದು ತೆಗೆದುಕೊಂಡು ಅದರಲ್ಲಿ ಅರ್ಧವನ್ನು " ನಿಮ್ಮ ಭಾಗವಿದು " ಎಂದು ತೆಗೆದು ಕೊಡಲು ಬಂದರು.

ನಾನು, ಅವರು ಇದೇ ಮೊದಲಸಲ ಎಂದಾಗ ' ನನಗೂ ಇದೇ ಮೊದಲಸಲ ' ಎಂದು ಇದ್ದಕ್ಕಿದ್ದ ಹಾಗೇ ಅಂದುಬಿಟ್ಟೆ.

" ಯಾಕೆ, ನಿನ್ನೆಯ ದಿನ ನೀವು ಬಲು ಗೆಲುಮುಖವನ್ನು ಹಾಕಿಕೊಂಡಿದ್ದಿರಿ. ಗೆಲ್ಲುತ್ತಿದ್ದಿಲ್ಲವೇ ? " ಎಂದರು.

" ಹಾಗಾದರೆ ನಿನ್ನೆಯೂ ನೀವು ಬಂದಿದ್ದಿರಾ ? " ಎಂದೆ.

ಅವರು ಉತ್ತರವನ್ನು ಕೊಡಲಿಲ್ಲ. ದುಡ್ಡನ್ನು ಎಣಿಸಿ ನನ್ನ ಕೈಗೆ ಕೊಡಲು ಹೋದರು.

ನಾನು " ಬೇಡಿ, ನೀವು ನಂಬರನ್ನು ಹೇಳಿದವರು, ಅರ್ಧ ದುಡ್ಡೂ ನಿಮ್ಮದು. ಎಲ್ಲವನ್ನೂ ನೀವೇ ತೆಗೆದುಕೊಳ್ಳಬೇಕು " ಎಂದು ಹೇಳಿದೆ.

" ಅದು ಹೇಗೆ ? " ಎಂದು ಅವರು ಎಷ್ಟು ನನ್ನನ್ನು ಬಲವಂತಪಡಿಸಿದರೂ ನಾನು ತೆಗೆದುಕೊಳ್ಳಲಿಲ್ಲ. ನಾನು ಸಾಲವಾಗಿ ಕೊಟ್ಟಿದ್ದ ಒಂದು ರೂಪಾಯಿಯನ್ನಾದರೂ ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಕೇಳಿಕೊಂ

ಡರು. ನಾನು ಅದನ್ನೂ ಮುಟ್ಟಲಿಲ್ಲ. ಕೊನೆಗೆ ಅವರು ನಿರಾಶರಾಗಿ ವಿನಯವನ್ನು ತೋರಿಸುವ ದೃಷ್ಟಿಯಿಂದ ನೋಡಿ "ಹಾಗಾದರೆ ನಾನು ಬರುತ್ತೇನೆ" ಎಂದು ಹೇಳಿ ಹೊರಟುಬಿಟ್ಟರು.

ಅವರು ಹೊರಟಾಗ 'ನೀವು ಯಾರು' ಎಂದು ನಾನವರನ್ನು ಕೇಳಿ ತಿಳಿದುಕೊಳ್ಳಬೇಕೆಂದೆನಿಸಿತು.

ಒಡನೆಯೇ 'ಛೆ, ಅದು ಸರಿಯಲ್ಲ' ಎಂದು ತೋರಿತು. ಇದೇ ಅವರು ಮೊದಲಸಲ ಅಲ್ಲಿಗೆ ಬಂದಿದ್ದರು ಎಂದು ನಾನು ಎಣಿಸಿದ್ದರೆ ನಾನು ನಿನ್ನೆ ಬಂದಿರುವುದನ್ನು ಗುರುತಿಸಿ ಹೇಳಿದರು.... ಆದರೆ.... ಯಾವಾಗಲೂ ಜೂಜಿಗೆ ಬರುತ್ತಿರುವವರಾದರೆ ದುಡ್ಡನ್ನು ಇತರರಿಗೆ ಕೊಟ್ಟು ಮೋಸ ಹೋಗುತ್ತಿದ್ದರೇ....ಅಂತೂ ಅವರ ವಿಷಯವು ನನಗೆ ದೊಡ್ಡ ಸಮಸ್ಯೆಯಾಗಿಯೇ ತೋರುತ್ತಿತ್ತು.

ಅವರ ವಿಷಯದಲ್ಲಿ ಸಂಶಯವೇ ?

ಆದರೆ ನನ್ನನ್ನು ಬೀಳ್ಕೊಟ್ಟವರು ಯಾರ ಕಡೆಯೂ ತಲೆಯೆತ್ತಿ ನೋಡದೆ ಅಲ್ಲಿಂದ ಹೊರಟು ಹೋಗುತ್ತಿದ್ದರು. ನಾನೂ ಅವರ ಹಿಂದೆಯೇ ಹೊರಟೆ. ಹೊರಟರೆ ಅಕ್ಕಪಕ್ಕದಲ್ಲಿ ಅವರನ್ನು ಗುರುತಿಸಿ ಇತರರು ಮಾತನಾಡುತ್ತಿದ್ದುದು ಕೇಳಿಬಂದಿತು. ಅವರನ್ನು ಕೇಳುತ್ತಾ ಹೆಜ್ಜೆಗಳನ್ನು ನಿದಾನಮಾಡಿದೆ.

ಒಬ್ಬರು—"ನೋಡು, ಅವಳು ಒಂದು ದಿನವೂ ತಪ್ಪುವುದಿಲ್ಲ. ಒಂದು ಪಂದ್ಯವನ್ನೂ ಬಿಡುವುದಿಲ್ಲ. ದುಡ್ಡನ್ನು ಹಾಗೆ ತಡೆಯಿಲ್ಲದೆ ಕಳೆಯುತ್ತಿದ್ದಾಳೆ. ಅವಳಿಗೆ ದುಡ್ಡು ಎಲ್ಲಿಂದ ಬರುತ್ತದೆಯೋ ! ಎಷ್ಟು ಜನ ಸ್ನೇಹಿತರಿದ್ದಾರೆಯೋ !" ಎಂದರು.

ಇನ್ನೊಬ್ಬರು—"ಆ ದುಡ್ಡು ಇನ್ನು ಯಾರದೂ ಅಲ್ಲ; ಅವಳದೇ ಕಾಣ್ರಿ. ಅವಳ ಗಂಡಂದು. ಅವನೊಬ್ಬ ನಾಮರ್ದ. ಮಕ್ಕಳನ್ನು ಎತ್ತಿಕೊಂಡು ಮನೇಲಿ ಇರುತ್ತಾನೆ. ಇವಳು ಹೊರಗೆ ಸಿಸ್ತುಮಾಡಿಕೊಂಡು ದುಡ್ಡು ಚೆಲ್ಲುತ್ತಾಳೆ."

ಇನ್ನೊಂದು ಕಡೆ ಒಬ್ಬರು—"ಪಾಪ, ಯಾವ ಹೊತ್ತಿಗೆ ಹೇಗೋ, ಯಾರ ವಿಚಾರ ಹೇಗಿರುವುದೋ" ಎಂದು ವೇದಾಂತ ನುಡಿಯುತ್ತಿದ್ದರು.

ಇನ್ನೂ ಮುಂದಕ್ಕೆ ಹೋದೆ. ಅಂತೂ ಎಲ್ಲಿ ಹೋದರೂ ಅವಳ ವಿಚಾರವೇ !

ಅಲ್ಲಿ ಒಬ್ಬರು—" ಅವಳ ಧೈರ್ಯ ನೋಡೋ ಗಂಡಭೇರಿ! ಒಬ್ಬಳೇ ಬರುತ್ತಾಳೆ, ತನ್ನ ಕೆಲಸ ಮಾಡಿಕೊಳ್ಳುತ್ತಾಳೆ, ಹೊರಟುಹೋಗುತ್ತಾಳೆ. ಇಲ್ಲಿ ಗಂಡಸರನ್ನು ನೋಡು, ಅವಳಿಗೆ ಗುಲಾಮರಾಗಿ ಹೇಗೆ ಕೆಲಸ ಮಾಡುತ್ತಿರುತ್ತಾರೆಯಂತೀ, ಅದೇ ನನಗೆ ಆಶ್ಚರ್ಯ " ಎಂದರು.

ಇನ್ನೂ ಮುಂದಕ್ಕೆ ಹೋದೆ. ಅಲ್ಲಿ ಒಬ್ಬರು ತನ್ನ ಪಕ್ಕದಲ್ಲಿದ್ದ ಇನ್ನೊಬ್ಬರಿಗೆ ಆಕೆಯನ್ನು ತೋರಿಸುತ್ತಾ " ಆಕೆ ಯಾರು ನಿನಗೆ ಗೊತ್ತೇ.... ಅವರ ಮಗಳು. ಇದರ ಆಫೀಸಿನಲ್ಲಿ ಇರಲಿಲ್ಲವೇ, ಮೊನ್ನೆ ರಿಟ್ರೆಂಚ್‌ಮೆಂಟಿನಲ್ಲಿ ತೆಗೆದು ಹಾಕಿಬಿಟ್ಟರು ನೋಡು, ಅವರ ಹೆಂಡತಿ."

ಈತ—" ಅವರು ಯಾಕೆ ಬಂದರೋ ಇಲ್ಲಿಗೆ. ಎಂಥ ಒಳ್ಳೆಯ ಮನೆತನದವರು ! ಎಷ್ಟು ಮಾನಸ್ತರು ! "

ಆತ—" ಅದಕ್ಕೇ ಅಪ್ಪ ಆಕೆ ಬಂದಿದ್ದು. ನಾಲದಕ್ಕೆ ಇಬ್ಬರು ಮಕ್ಕಳು ಇದ್ದಾರೆ. ಜೊತೆಗೆ ಇವರಿಬ್ಬರು. ಜರಗಬೇಕಲ್ಲ ರಥ; ಒಟ್ಟು ನಾಲ್ಕು ಜನದ ಸಂಸಾರ. "

ಈತ—" ಏನು ಈ ವೃತ್ತಿ ! ಈ ಹೀನವೃತ್ತೀನಾ ? "

ಆತ—" ಬಿಡತು ಬಿಡತು ಅನ್ನು, ಪಾಪ, ಗಂಡಾ ಆಕೆ ಎಲ್ಲಾ ಎಷ್ಟೆಷ್ಟೋ ಪ್ರಯತ್ನಪಟ್ಟರು. ಏನೇನೋ ಮಾಡಿದರು. ಏನೂ ಪ್ರಯೋಜನಕ್ಕೆ ಬರಲಿಲ್ಲ. ಅವರ ಪ್ರಾವಿಡೆಂಟು ಫಂಡಿನಲ್ಲಿ ಬಂದಿದ್ದ ಹಣ, ಅದರಲ್ಲಿ ಎಲ್ಲಾದರೂ ಅವರ ಅದೃಷ್ಟ ನೋಡೋಣ ಎಂದು ಬಂದರು. ಗಂಡ ಹೊರಗಡೆ ತಲೆಯಿಡಲಾರ. ಅವಮಾನ. ಈಕೆ ನೋಡು, ಯಾರನ್ನೂ ಲೆಕ್ಕಿಸದೆ ಸಮಾಜಕ್ಕೂ ಹೆದರದೆ ಸಂಸಾರದ ಸಲುವಾಗಿ ಅದೃಷ್ಟ ಪರೀಕ್ಷೆಗೆ ಬಂದಿದ್ದಾಳೆ. ಏನಾಗುತ್ತಿದೆಯೋ. "

ಇವರ ಮಾತುಗಳನ್ನು ನಿಧಾನವಾಗಿ ಆಲಿಸುತ್ತಾ ನಿಂತೆ. ಅಷ್ಟರಲ್ಲಿ ಆಕೆಯಾಗಲೇ ಹೊರಟುಹೋಗಿದ್ದಳು. ನಾನೂ ಅಲ್ಲಿಂದ ಹೊರಟೆ. ಆಕೆಯು ಕಾಣಿಸಲಿಲ್ಲ.

ಸಂಜೆ ಹಿಡಿದ ಸೋನೆಮಳೆ; ಜಿನುಗುತ್ತಲೇ ಇದೆ. ನಮ್ಮ ಮನೆಗೆ ಬಸವನಗುಡಿಗೆ ನಾಲ್ಕು ಮೈಲಿಗಳಾಗುತ್ತದೆ. ಹೊಟ್ಟೆಯಲ್ಲಿ ಬೇರೆ ಹಸಿಯುತ್ತಿತ್ತು. ಯಾವುದಾದರೂ ಒಂದು ಗಾಡಿಯನ್ನು ಮಾಡಿಕೊಂಡು ಹೊರಟುಹೋಗೋಣವೆಂದು ಜೇಬಿನಲ್ಲಿ ಏನಾದರೂ ದುಡ್ಡು ಇದೆಯೋ ನೋಡಲು ಜೇಬುಗಳೆಲ್ಲವನ್ನೂ ಹುಡುಕಿದೆ. ಇತ್ತು. ಎಷ್ಟು ಎನ್ನುವಿರಿ, ಮೂರುಕಾಸಿನ ಬಿಲ್ಲೆ.

ಮಳೆಗಾಗಿ ನಿಲುವಂಗಿಯನ್ನು ಹಾಕಿಕೊಂಡು ಅಲ್ಲಿಂದ ಒಬ್ಬನೇ ಹೊರಟೆ. ದಾರಿಯ ಉದ್ದಕ್ಕೂ ಆಕೆಯ ವಿಷಯವೇ. ಮನಸ್ಸು ಬೇರೆ ಡೆಗೆ ಸುಳಿಯದು.

ಏನು, ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳುತ್ತಿದ್ದಾರೆ. ಯಾವುದು ನಿಜ; ಯಾವುದು ಸುಳ್ಳು. ಜನರ ಬಾಯಿಗೆ ಎಲ್ಲಿಯಿದೆಯೋ; ತಡೆಯುಂಟೇ. ನಮ್ಮ ಈ ಪರಿಸ್ಥಿತಿಯಲ್ಲಿ, ಈ ಸಮಾಜದಲ್ಲಿ ಹೆಂಗಸರು ಹೊರಗೆ ಹೀಗೆ ಬಂದರೆ ಯಾರು ತಾನೆ ಏನನ್ನು ತಾನೆ ಆಡಿಕೊಳ್ಳುವುದಿಲ್ಲ.

ನಾನು ಆಕೆಯನ್ನು ನೋಡಿದ್ದರಲ್ಲಿ ಯಾವುದನ್ನೂ ನಿಶ್ಚಯಿಸಿ ಹೇಳುವಂತಿರಲಿಲ್ಲ. ಆದರೂ ಒಂದು ವಿಧದ ಸ್ಥೈರ್ಯ, ಹಟಭಾವ ಎದ್ದು ಕಾಣುತ್ತಿತ್ತು. ಅದು ಯಾವುದಕ್ಕೆ ತಾನೆ ಅನ್ವಯಿಸುವುದಿಲ್ಲ......... ವಿನಯ ಮೂರ್ತಿಯೇನೋ ಹೌದು; 'ಅತಿವಿನಯಂ ಧೂರ್ತಲಕ್ಷಣಂ' ಎನ್ನುವಂತಲ್ಲ. ಯಾವುದನ್ನೂ ಹೇಗೆ ಎಂದು ಹೇಳುವುದು.

ದಾರಿಯ ಉದ್ದಕ್ಕೂ ಅದನ್ನೇ ಯೋಚಿಸುತ್ತಾ ಹೊರಟೆ.

ಆಕೆಯನ್ನು ಹಿಂದೆ ಎಲ್ಲಾದರೂ ನೋಡಿದ್ದೆನೇ ! ಎಷ್ಟು ಯೋಚಿಸಿದರೂ ಏನೂ ತೋಚಲಿಲ್ಲ. ನೋಡಿದ್ದ ಹಾಗೆ ಕಾಣೆ.

ನನಗೆ ಹೊಟ್ಟೆ ಬಹಳ ಹಸಿಯುತ್ತಿತ್ತು. ಏನು ಮಾಡಲಿ. ಮೂರು ಕಾಸಿಗೆ ಒಂದು ಲೋಟ ಕಾಫಿಯು ಕೂಡ ಸಿಕ್ಕುವುದಿಲ್ಲ. ಆ ಸಮಯದಲ್ಲಿ ನನ್ನ ಅರ್ಧಭಾಗ ಬಂದ ದುಡ್ಡನ್ನು ತೆಗೆದುಕೊಳ್ಳಬಹುದಾಗಿದ್ದತಲ್ಲಾ; ಕೊನೆಯ ಪಕ್ಷ ನಾನು ಅವರಿಗೆ ಕೊಟ್ಟ ಆ ರೂಪಾಯನ್ನಾದರೂ

ತೆಗೆದುಕೊಂಡಿದ್ದರೆ ಚೆನ್ನಾಗಿತ್ತಲ್ಲಾ ಎಂದು ತೋರಿತು. ಒಡನೆಯೇ ನಾನು ಅವರ ವಿಷಯದಲ್ಲಿ ಕೇಳಿದ ಆ ಕೊನೆಯ ಸಂಭಾಷಣೆಯು ಮನಸ್ಸಿಗೆ ಬಂದುಬಿಟ್ಟಿತು.

ಆ ಮೂರು ಕಾಸುಗಳಿಗೂ ಬಟಾಣಿಯನ್ನು ತೆಗೆದುಕೊಂಡು ಜೇಬಿನಲ್ಲಿ ಹಾಕಿಕೊಂಡು ಹೊರಟೆ.

ಅದು ಗರಿಗರಿಯಾಗಿದ್ದರೆ ತಿನ್ನಲು ಚೆನ್ನಾಗಿರುತ್ತೆ. ಈಗಲೋ ಆ ಮಳೆಗೆ ಸೇದುಕೊಂಡಿತ್ತು. ಅದನ್ನೇ ಒಂದೊಂದು ಕಾಳುಗಳನಾಗಿ ಬಾಯಿಗೆ ಹಾಕಿಕೊಂಡು ಅಗಿಯುತ್ತಾ ಹೊರಟೆ.

ನಿನ್ನೆ ಅಲ್ಲಿಂದ ಹಿಂತಿರುಗಿದಾಗ ಇದ್ದ ಆ ಸಂತಸವೆಲ್ಲಿ! ಇಂದು ಈಗ ಹಿಂತಿರುಗುತ್ತಿರುವಾಗ ಇರುವ ಈ ದುಗುಡವೆಲ್ಲಿ! ನನಗೆ ದುಡ್ಡು ಹೋಗಿದ್ದುದಕ್ಕೆ ಸ್ವಲ್ಪವೂ ಚಿಂತಿಸುವುದಿಲ್ಲ. ಹೋಯಿತು, ಪುನಃ ಸಂಪಾದಿಸಬಲ್ಲೆ. ಶಕ್ತಿಯಿದೆ, ಸರಿಯಾಗಿ ನಡಿಯುತ್ತಿದೆ. ಆದರೆ ಅವರ ಬಾಳು! ಅದೇ ಯೋಚನೆ.

ಒಂದು ಮೈಲಿ ಬಂದಿರಬಹುದು. ಆ ಒಂದು ಮೈಲಿ ನಡೆಯಲು ಒಂದು ಗಂಟೆಯನ್ನೇ ತೆಗೆದುಕೊಂಡಿದ್ದೆನೇನೋ! ದಾರಿಯೂ ನನ್ನಲ್ಲಿ ಯಾವ ದುಗುಡವು ಆವರಿಸಿತ್ತೋ ಅದೇ ಜೋಲುಮೋರೆಯನ್ನೇ ಹಾಕಿಕೊಂಡಿತ್ತು. ಜನರ ಸುಳುವೇ ಇಲ್ಲ. ಎಲ್ಲೋ ಒಬ್ಬೊಬ್ಬರು ಅಲ್ಲಲ್ಲಿ ಕಾಣಿಸಿಕೊಂಡು ಮಂಕುಮಂಕಾಗಿ ಮಾಯವಾಗುತ್ತಿದ್ದರು.

ಒಂದು ಜಟಕಾಗಾಡಿಯು ನನ್ನ ಮೇಲೆ ಬಂದು ಬಿಡುವ ಹಾಗೆ ಬಂದು ಮುಂದಕ್ಕೆ ಹಾಯ್ದು ಹೋಯಿತು. ಅದರಿಂದ ಎಗರುವ ರಚ್ಚಿಗೆ ಹೆದರಿ ಪಕ್ಕಕ್ಕೆ ಹೋದೆ. ಆ ಗಾಡಿಯು ಮುಂದಕ್ಕೆ ಹೋಗಿ ಇದ್ದಕ್ಕಿದ್ದ ಹಾಗೆಯೇ ನಿಂತಿತು.

ನೋಡಿದೆ. ಆ ಗಾಡಿಯಲ್ಲಿ ಆಕೆ! ಜೊತೆಗೆ ಇನ್ನೊಬ್ಬ ತರುಣ! ತಿಳಿಯಾಗುತ್ತಿದ್ದ ಮನಸ್ಸು ಪುನಃ ಕಲಕಿಹೋಯಿತು.

ಏನು! ಅವನು ನನ್ನನ್ನು ಕರೆದನೇನು!

ಆತ ನನ್ನನ್ನು ಕರೆದು “ ತಮ್ಮ ಪರಿಚಯ ನನಗಿಲ್ಲ. ಆದರೂ ತಮ್ಮಿಂದ ನಮಗೆ ಬಹಳ ಉಪಕಾರವಾಯಿತಂತೆ. ಎಲ್ಲಾ ಹೇಳಿದರು. ಒಬ್ಬರೇ ಹೋಗುತ್ತಿದ್ದೀರಿ. ದಯವಿಟ್ಟು ಬರಬೇಕು. ತಮ್ಮ ಮನೆಗೆ ಬಿಟ್ಟು ನಾವು ಮುಂದಕ್ಕೆ ಹೋಗುತ್ತೇವೆ ” ಎಂದರು.

ಆತನೊಂದಿಗೆ ಸ್ನೇಹ ಯಾರಿಗೆ ಬೇಕು. “ ಏನೂ ಬೇಡಿ, ಅಂಥಾ ದ್ದೇನೂ ಇಲ್ಲ ” ಎಂದು ಆಕೆಯನ್ನು ಕುರಿತು ಜುಗುಪ್ಸೆಯಿಂದ “ ನಾನೇ ತಮ್ಮನ್ನು ಮನೆಗೆ ಕರೆದುಕೊಂಡು ಹೋಗಿಬಿಟ್ಟು ಬರಬೇಕೆಂದಿದ್ದೆ. ತಾವು ಆಗಲೆ ಹೊರಟುಬಿಟ್ಟಿದ್ದಿರಿ ” ಎಂದೆ.

ಆಕೆ “ ಇಲ್ಲ, ಮನೆಯಲ್ಲಿ ಮಕ್ಕಳನ್ನು ಬಿಟ್ಟು ಬಂದಿದ್ದೆ. ಅದಕ್ಕೇ ಅಲ್ಲಿಂದ ಆದಷ್ಟು ಜಾಗ್ರತೆ ಹೊರಟೆ. ದಾರಿಯಲ್ಲಿ ಮಳೆಗೆ ಸಿಕ್ಕಿಬಿಟ್ಟೆ. ಇವರು ನೋಡಿ, ನಾನು ಬರುವುದು ಹೊತ್ತಾದುದನ್ನು ಕಂಡು ಮಕ್ಕಳನ್ನು ಮಲಗಿಸಿ ನನ್ನನ್ನು ಹುಡುಕಿಕೊಂಡು ತಾವೇ ಹೊರಟು ಬಂದಿದ್ದಾರೆ ” ಎಂದರು.

ಏನು ಆ ಕೊನೆಯ ಸಂಭಾಷಣೆ ! ಅದು ನಿಶ್ಚಯವೇ! ಅವರಿಬ್ಬ ರನ್ನೂ ಆ ಎಲೆಕ್ಟ್ರಿಕ್ ಬೆಳಕಿನಲ್ಲಿ ಚೆನ್ನಾಗಿ ದೃಷ್ಟಿಸಿ ನೋಡಿದೆ. ಕೊನೆಗೆ ನಾನು “ ಒಳ್ಳೇದಮ್ಮ, ನಮ್ಮ ಮನೆ ಇದೇ ಸಂದಿಯಲ್ಲಿ ಇದೆ. ತಾವೇನೂ ಅಷ್ಟು ತೊಂದರೆ ತೆಗೆದುಕೊಳ್ಳಬೇಕಾಗಿಲ್ಲ ” ಎಂದು ಸುಳ್ಳನ್ನು ನುಡಿದು ಪಕ್ಕದ ಸಂದಿಗೆ ತಿರುಗಿದೆ.

ಅವರ ಗಾಡಿಯು ಮುಂದಕ್ಕೆ ಹೊರಟು ಹೋಯಿತು.

* * * * *

ಹೌದು. ದೇವರ ದಯೆಯಿಂದ ಆತ ನನ್ನನ್ನು ಗುರುತಿಸಲಿಲ್ಲ. ಈಗ ನಾನವರಿಬ್ಬರನ್ನೂ ಚೆನ್ನಾಗಿ ಬಲ್ಲೆ. ಹಿಂದೆ ಆಕೆಯನ್ನು ನೋಡಿ ರಲಿಲ್ಲ. ಅಷ್ಟೆ. ಅವರು ನಮ್ಮ ದೂರದ ಸಂಬಂಧಿಕರು.

* * * * *

ಹೋಗಿದ್ದವರು......ಹೋಗೆ ಆದರು. ಆತನ ತಂದೆ...ಎಷ್ಟು ದೊಡ್ಡ ಮನುಷ್ಯರು. ಅವರ ಮನೆ, ತುಂಬಿದ ಮನೆ. ಅದು ಒಂದು ಛತ್ರ. ಆದರೂ ಅವರಿಗೆ ಅವನೊಬ್ಬನೇ ಮಗ... ಆದರೂ.... ಕೊನೆಗೆ....ಕೊನೆಗೇನಾಯಿತು....ಅವರ ಜೀವನವೂ ಒಂದು ಜೂಜಾಯಿತೇ!...ಕೊನೆಯ ಆಸೆ ಕೊನೆಗೆ ಜೂಜಿನಲ್ಲಿಯೇ ನಿಂತಿತೇ!

---

# ಮನೆ ಮೇಷ್ಟರು

ಮೂರ್ತಿ ಎಂದಿನಂತೆ ಆ ದಿನವೂ ಅವರ ಮನೆಗೆ ಪಾಠಕ್ಕೆ ಹೋದ ಎಂದಿನಂತೆ ಎಂದು ನಾನು ಹೇಳಿದ್ದರಲ್ಲಿ ಒಂದು ಉದ್ದೇಶವಿದೆ. ಅವನು ಅವರ ಮನೆಗೆ ಪಾಠಕ್ಕೆ ಹೋಗುವುದರಲ್ಲಿ ನಿಯಮವೊಂದನ್ನು ಸರಿಯಾಗಿ ಇಟ್ಟುಕೊಂಡಿರಲಿಲ್ಲ. ಹೋದ ದಿವಸ ಹೋದ; ಇಲ್ಲದ ದಿವಸ ಇಲ್ಲವೇ ಇಲ್ಲ. ಹೋಗುವುದೂ ಅವನಿಗೆ ತೋರಿದ ಹೊತ್ತಿನಲ್ಲಿ; ಅವಕಾಶವಾದಾಗ. ಪಾಠ ಹೇಳುವುದರಲ್ಲಿಯೂ ಅಷ್ಟೆ. ಒಂದು ದಿನ ಅರ್ಧ ಘಂಟೆಗೇ ಪಾಠವನ್ನು ಹೇಳಿ ಮುಗಿಸಿ ಬಿಟ್ಟಿರುತ್ತಿದ್ದನು. ಇನ್ನೊಂದು ದಿವಸವಾದರೋ ಮೂರು ಘಂಟೆಗಳಾದರೂ ಪಾಠ ಹೇಳಿಕೊಟ್ಟಿದ್ದು ಮುಗಿಯುತ್ತಿರಲಿಲ್ಲ. ಇನ್ನು ಯಾರ ಮನೆಯಾದರೂ ಆಗಿದ್ದರೆ ಅವನ ಆ ವರ್ತನೆಯ ಸಲುವಾಗಿ ಎಂದೋ ಅವನಿಗೆ ದಕಲುಪಟ್ಟಿಯನ್ನು ಕೊಟ್ಟುಬಿಡುತ್ತಿದ್ದರು. ಆದರೆ ಇಲ್ಲಿ ಅವರು ಅವನಿಗೆ ಬಹಳ ಉಪಕಾರವನ್ನು ಮಾಡಿದ್ದಾರೆಂದು ಮನಃಪೂರ್ವಕವಾಗಿ ಹೇಳಲೇಬೇಕು.

ಅವನು ಹಾಗೆ ಸಕಾಲಕ್ಕೆ ಹೋಗಿ ಹೇಳಿಕೊಟ್ಟು ಹೋಗದೆ ಇರುವುದಕ್ಕೆ ಕಾರಣ ಅವನ ಉದ್ದೇಶಪೂರ್ವಕವಾದದ್ದಲ್ಲ; ಅವನ ತಾಪತ್ರಯ ಅವನಿಗೆ ಕಾಲನಿಯಮವನ್ನನುಸರಿಸಲು ಅಸ್ಪದ ಕೊಟ್ಟಿರಲಿಲ್ಲವೆಂದು ಅವರು ಬಲ್ಲರು. ಆದುದರಿಂದ ಅವರು ಅವನ ಗೊಡವೆಗೇ ಹೋಗುತ್ತಿರಲಿಲ್ಲ. ಇತರ ಮನೆಗಳಲ್ಲಿಯೂ ಹೀಗೆಯೇ ಇರುತ್ತಾರೆಂದು ಯಾರು ಹೇಳಲಾದೀತು! ಮೂರ್ತಿಗೆ ಇಂತಹ ಮನೆಯ ಪಾಠವು ಸಿಕ್ಕಿದ್ದು ಅವನ ಅದೃಷ್ಟವೆಂದೇ ಹೇಳಬೇಕು. ಹೌದು ಅದೃಷ್ಟವೇ! ಅವನ ದುರದೃಷ್ಟಪರಂಪರೆಯಲ್ಲಿ ಇದು ಒಂದು ಅದೃಷ್ಟ! ಆದರಲ್ಲಿಯೂ ಅವನ ಕಷ್ಟಪರಂಪರೆಗಳೆಲ್ಲವೂ ಒಂದೆಡೆಗೇ ಕೂಡಿಬಂದಿದ್ದ

ಕಾಲದಲ್ಲಿ ಈ ಸಹಾಯ ದೊರೆತಿದ್ದು, ನೀರಿನಲ್ಲಿ ಮುಳುಗುತ್ತಿದ್ದವನ ಬಳಿಗೆ ಕತ್ತಾಳೆಯ ಮರವೊಂದು ತಾನಾಗಿ ತಾನು ತೇಲಿಕೊಂಡು ಬಂದಂತಾಗಿತ್ತು.

ಅವರ ಮನೆಯಲ್ಲಿದ್ದ ಹುಡುಗನನ್ನು ಇಂಗ್ಲೀಷು ಮೊದಲನೆಯ ತರಗತಿಗೆ ಹಾಕಿದಂದಿನಿಂದ, ಈ ಐದಾರು ವರ್ಷಗಳಿಂದಲೂ ಅವನೇ ಆ ಹುಡುಗನಿಗೆ ಪಾಠ ಹೇಳುತ್ತಾ ಬಂದ. ಅವರು ಕೊಡುತ್ತಿದ್ದ ಅತಿ ಸ್ವಲ್ಪವಾದರೂ ಆ ಹೊತ್ತಿನಲ್ಲಿ ಅದು ಅವನಿಗೆ ಅಮೂಲ್ಯವಾಗಿತ್ತು. ಮೊದಲಿನಿಂದಲೂ ಬಾಳೆಯ ಹಣ್ಣಿನ ಗುಡಾಣದಲ್ಲಿ ಬೆಳೆದಿದ್ದವನು. ಒಮ್ಮೆಯೇ ಬಿಸಿಲು, ಮಳೆ, ಕಾರ್ಮಳೆ, ಸಿಡಿಲುಗಳ ತಾಪಕ್ಕೆ ಸಿಕ್ಕಿಬಿಟ್ಟಿದ್ದ. ಮಳೆಯು ಆರಂಭವಾಗುವ ಮೊದಲೇ ವಿಪರೀತ ಗಾಳಿಯೆದ್ದು ಅವನ ಉಡುಗೆತೊಡುಗೆಗಳೆಲ್ಲವನ್ನೂ ಹೊಡೆದುಕೊಂಡು ಹೋಗಿಬಿಟ್ಟಿದ್ದವು.

ಮೂರ್ತಿ ಚೊಚ್ಚಲುಮಗ. ಒಬ್ಬನೇ ಮಗನಾಗಿದ್ದ ಅವನ ತಾಯಿಗೆ. ಆಕೆ ಅವನನ್ನು ಅತಿ ಮಮತೆಯಿಂದ ಸಾಕಿದ್ದಳು. ಆದರೆ ಅವನಿಗೆ ಉಡುಗೆ ತೊಡುಗೆ ತೊಡಿಸಿ, ಹಣೆಗೆ ತಿಲಕವಿಟ್ಟು, ಕೈಗೆ ಸ್ಲೇಟು ಕೊಟ್ಟು, ಶಾಲೆಗೆ ಕಳುಹಿಸಿ ಅವನು ಹಿಂತಿರುಗಿ ಬರುವವರೆಗೂ ಅವನ ಬರವನ್ನೇ ಎದುರು ನೋಡುತ್ತಿದ್ದು, ಬಂದ ಮೇಲೆ 'ಅಂಗಿ ಬಟ್ಟೆ ಹಾಗಿರಲಿ, ಬಾ ಕೈತುತ್ತು ಹಾಕುತ್ತೇನೆ ಎಷ್ಟು ಹಸಿದಿರುವೆ' ಎಂದು ಮುದ್ದಿಸಿ, ಊಟ ಮಾಡಿಸಿ, ನಲಿಸಿ ನಲಿದಾಡುವ ಸಮಯಕ್ಕೆ ತೀರಿಕೊಂಡು ಬಿಟ್ಟಿದ್ದಳು. ತಾಯಿಯ ಕಾರ್ಯಭಾರವನ್ನು ತಂದೆಯೇ ವಹಿಸಿಕೊಂಡು, ಪುನಃ ಮದುವೆಯಾಗ ಬೇಕೆನ್ನುವ ಯೋಚನೆಗೂ ಸುಳಿವುಗೊಡದೆ ಮಗನನ್ನು ಮಮತೆಯಿಂದ ಸಾಕತೊಡಗಿದ. ಆದರೆ ಮೂರ್ತಿ ಇಂಗ್ಲೀಷು ಕಲಿತು ಮಾಧ್ಯಮಿಕ ಶಾಲೆಗೆ ಸೇರುವ ಹೊತ್ತಿಗೆ ಅವನ ತಂದೆಗೆ ವರ್ಗವಾಗಿ ಹೋಯಿತು. ಸರಕಾರಿ ಹುದ್ದೆ! ಆಗ ಅವನಿಗೆ ತನ್ನ ಸ್ನೇಹಿತನೋರ್ವನ ಮನೆಯಲ್ಲಿ ಏರ್ಪಾಡು ಮಾಡಿ ಕೆಲಸದ ಮೇಲೆ ತೆರಳಿದ. ಮನವು ಮಟ್ಟಿಗೆ ಮಗನ ಮೇಲೆ ನಿಂತು ಹೋಗಿತ್ತು. ಮಗ ಹೈಸ್ಕೂಲಿಗೆ ಬರುವ ಹೊತ್ತಿಗೆ ಸ್ನೇಹಿತರ ಮನೆಯಲ್ಲಿಯೂ ಅವನಿಗೆ ಸೌಕರ್ಯಗಳು ಸಾಲವೆಂದು ಸ್ನೇಹಿತನಿಂದ ನಿಷ್ಠೂರವು ಬಂದರೂ ಚಿಂತೆಯಿಲ್ಲವೆಂದು ಮಗನನ್ನು ಹಾಸ್ಟಲಿನಲ್ಲಿ ಇಟ್ಟು

ಓದಿಸತೊಡಗಿದ. ಅವನಿಗೆ ಬೇಕಾದ್ದನ್ನೆಲ್ಲಾ ತಂದುಕೊಡುತ್ತಿದ್ದ. ಅವನು ಕೇಳಿದಷ್ಟು ಹಣವನ್ನು ಕಳುಹಿಸಿಕೊಡುತ್ತಿದ್ದ.

ಆದರೆ ಮೂರ್ತಿ ದುರದೃಷ್ಟಶಾಲಿ. ಇತ್ತ ತಾನಿದ್ದ ತನ್ನ ತಂದೆಯ ಸ್ನೇಹಿತರ ಮನೆಯೂ ಇಲ್ಲವಾಯಿತು. ಅತ್ತ ಹಾಸ್ಟಲೂ ತಪ್ಪಿ ಹೋಯಿತು. ಹಾಸ್ಟಲಿಗೆ ಬಂದು ಒಂದೆರಡು ವರ್ಷಗಳಾಗುವುದರೊಳ ಗಾಗಿಯೇ ಅವನ ತಂದೆ ತೀರಿಕೊಂಡು ಬಿಟ್ಟ. ಅವನ ತಂದೆಯನ್ನು ಹೊಡೆದುಹಾಕಿ ಬಿಟ್ಟರು. ಮೂರ್ತಿ ತಬ್ಬಲಿಯಾಗಿ ಬಿಟ್ಟ. ಅನಾಥನಾದ.

ಹೊಡೆದು ಹಾಕಿ ಬಿಟ್ಟರು ಎಂದೆ. ಹೌದು. ಮೂರ್ತಿಯ ತಂದೆ ಯನ್ನು ಕೊಲೆ ಮಾಡಿದರು. ಏಕಾಏಕಿ ಅವನು ಬಲಿಗೆ ಬೀಳುತ್ತಿದ್ದವನಲ್ಲ. ಕಾಲವು ಸಮೀಪಿಸಿದಾಗ ತರ್ಕಕ್ಕೆ ವಿಚಾರಕ್ಕೆ ಸಮಯವಿರುವುದಿಲ್ಲ. ನಡೆಯಬೇಕಾದ್ದು ನಡೆದು ಹೋಗಿ ಬಿಡುತ್ತೆ. ಮೂರ್ತಿಯ ತಂದೆ ಮೂರ್ತಿಯ ತಾಯಿಯು ತೀರಿಕೊಂಡಂದಿನಿಂದ ಮೂರ್ತಿಯಲ್ಲಿಯೇ ಮನವನ್ನು ನಿಲ್ಲಿಸಿ, ಕಾಲವನ್ನು ತಳ್ಳುತ್ತಿದ್ದ. ವಿಧುರನಿಗೆ ಬೇರೆ ಯಾವ ಯೋಚನೆಗೂ ಅವಕಾಶವಿಲ್ಲದಂತೆ ಆಗಬೇಕಾದರೆ ನಾಕಷ್ಟು ಕೆಲಸ, ಸರಿ ಯಾದ ಸ್ನೇಹಿತರು ಮತ್ತು ಘನ ಉದ್ದೇಶಗಳ ಚಾಲತಿ ಇವುಗಳಿರಬೇಕು. ಇವುಗಳಲ್ಲಿ ಯಾವದು ಕಡಿಮೆಯಾಯಿತೆಂದರೂ ಮನಸ್ಸು ಮೊದಲಿನಂತೆ ಇರುವುದಿಲ್ಲ.

ಮೂರ್ತಿಯ ತಂದೆಗೆ ಮೂರ್ತಿ ಹೈಸ್ಕೂಲಿಗೆ ಬರುವ ವರೆಗೂ ಮೂರ್ತಿಯ ಸಲುವಾಗಿ ಹಗಲಿರುಳೂ ದುಡಿಯುವುದೇ ಆಗಿತ್ತು. ಮೂರ್ತಿ ದೊಡ್ಡವನಾದ. ತನ್ನ ಕಷ್ಟಸುಖಗಳನ್ನು ತಾನೇ ನೋಡಿಕೊಳ್ಳುವಷ್ಟ ರವನಾದ. ಅವನಿಗೆ ದುಡ್ಡೊಂದು ಕಳುಹಿಸಿಕೊಡುತ್ತಿದ್ದರೆ ನಾಕು. ಇತ್ತ ಮೂರ್ತಿಯ ತಂದೆಗೂ ಪಡಿಪಿಯು ಹೆಚ್ಚಾಯಿತು. ಮನೆಯಲ್ಲಿ ಬೇಕಾದ ಹಾಗಿದೆ; ಆದರೆ ಮನೆ ಎನ್ನುವುದೇ ಇಲ್ಲದಂತಾಗಿದೆ, ಅವನಿಗೆ. ರೂಪು ಇದೆ. ಯೌವನವಿದೆ. ಅವನು ಕುದುರೆಯ ಮೇಲೆ ಕುಳಿತು ಹಳ್ಳಿಗಳ ಕಡೆ ಸುತ್ತಿಕೊಂಡು ಬರಲು ಹೊರಟನೆಂದರೆ ಅವನ ಆ ಠೀವಿ ಯಾವ ಯೋಧನನ್ನಾದರೂ ಅಣಕಿಸುವಂತಿತ್ತು. ಅಜಾನುಬಾಹು. ಅಷ್ಟು

ವರುಷಗಳೂ ಸಂಯಮಿಯಾಗಿದ್ದ ಆ ರೂಪಕ್ಕೆ ಮರುಳು ಹೋಗದೆ ಇರ ತಕ್ಕವರಾರು ? ಅವನು ಆಗಾಗ ಪಕ್ಕದ ಊರಿನ ಜಮೀನದಾರರ ಮನೆಗೆ ಹೋಗಿ ಬರುವುದಿತ್ತು. ಅಲ್ಲಿ ಅವರಿಗಿದ್ದ ಓರ್ವಳೇ ಮಗಳ ಒಲವಿಗೆ ಪಾತ್ರನಾದ. ಅವಳಿಗಿನ್ನೂ ಸತ್ಪಾತ್ರನಾರೂ ದೊರೆತಿರಲಿಲ್ಲವಾದ್ದರಿಂದ ಇನ್ನೂ ಮದುವೆಯನ್ನು ಮಾಡದೆ ಇದ್ದರು. ಬೆಳೆದು ಕುಳಿತಿದ್ದಳು. ಅವನು ಅವಳಿಗೆ ಸತ್ಪಾತ್ರನಾದ. ಆದರೆ ಅವರು ವೀರಶೈವರು. ಅವನು ಮಾಧ್ವಬ್ರಾಹ್ಮಣ. ಅಜಗಜಾಂತರ.

ಪ್ರೇಮಕ್ಕೆ ಕಡೆಯೇ? ಅವರೀರ್ವರು ಬೆರತು ಹೋದರು. ಆಕೆಯು ಗರ್ಭಿಣಿಯಾದಳು. ಅದು ಮನೆಯವರ ದೃಷ್ಟಿಗೆ ಬಿತ್ತು. ಅವನನ್ನು ಒಂದೇ ಹೊಸೆತಕ್ಕೆ ತೀರಿಸಿ ಬಿಟ್ಟರು. ಒಟ್ಟಿನಲ್ಲಿ ಮೂರ್ತಿ ಅನಾಥನಾಗಿ ಬಿಟ್ಟ. ದಿಕ್ಕೇ ಇಲ್ಲದವನಾದ.

ಪ್ರೇಮದ ವಿಷಯವನ್ನೆತ್ತಿದ್ದಾಯಿತು. ಅವರೀರ್ವರಲ್ಲಿ ನಡೆದ ಸಂಗತಿಯನ್ನೂ ಆ ಸಂದರ್ಭವನ್ನೂ ಸೂಕ್ಷ್ಮವಾಗಿ ಸೂಚಿಸಿಬಿಡುವುದೊಳ್ಳೆಯದು. ಮೂರ್ತಿಯ ತಂದೆಗೆ ಆ ಊರಿಗೆ ವರ್ಗವಾದ ಮೇಲೆ ಬೇಸರವು ಹೆಚ್ಚಿತು. ಸರಿಯಾದ ಸ್ನೇಹಿತರಿಲ್ಲ. ಅವನಿಗೆ ಸರಿದೂಗುವ ಜನರೆಲ್ಲಿ ಆ ಕೊಂಪೆಗಳಲ್ಲಿ ದೊರಕಬೇಕು ? ಅಲ್ಲಿ ಆ ಜಮೀನದಾರರ ಮಗಳೋರ್ವಳೇ ಆ ಸರಹದ್ದಿನಲ್ಲೆಲ್ಲಾ ವಿದ್ಯಾವಂತಳು. ಅವನು ಬೇಸರವಾದಾಗ ಅವರ ಮನೆಗೆ ಹೋಗುವನು. ಆಕೆಯೊಡನೆ ಅದೂ ಇದೂ ಮಾತನಾಡುತ್ತಾ ಕಾಲವನ್ನು ತೂಗುತ್ತಿದ್ದನು. ಕೆಲ ದಿನಗಳಲ್ಲಿಯೇ ಅವರೀರ್ವರೂ ಅತಿ ಸ್ನೇಹಿತರಾದರು. ತಮ್ಮ ತಮ್ಮ ಸಂಸಾರದ ಸುಖದುಃಖಗಳನ್ನೆಲ್ಲಾ ತಮ್ಮಲ್ಲಿ ಹೇಳಿಕೊಳ್ಳಲು ಮೊದಲು ಮಾಡಿದರು. ಆಕೆ ಮೂರ್ತಿ ತಂದೆಯ ಕತೆಯನ್ನು ಕೇಳಿ “ ತಾವು ಎಷ್ಟು ದಿನ ಹೀಗಿರಲಾಗುವುದು, ಮದುವೆಯನ್ನು ಮಾಡಿಕೊಳ್ಳಲೇ ಬೇಕು ” ಎಂಬ ಸಲಹೆಯನ್ನು ಸಲೇಸಲೇ ಕೊಡಲಾರಂಭಿಸಿದರು. ಒತ್ತಾಯಪಡಿಸತೊಡಗಿದರು. ಮೂರ್ತಿ ತಂದೆಯ ಕಿವಿ ಸ್ವಲ್ಪ ಜೋಲಿತು. ಆದರೆ ಅವನಿಗೆ ಮುಂದಿನ ಆಲೋಚನೆ ಹೊಳೆಯದು. ಮನದಲ್ಲಿಯೇ ಶಮನ ಮಾಡಿಕೊಳ್ಳುವನು. ಆದರೂ

ಬೀಜವು ಬೇರನ್ನು ಬಿಡಲಾರಂಭಿಸಿತು. ಚಿಗುರು ಎದ್ದಿತು. ಚಿವುಟು ವವರಾರಿಲ್ಲ. ಆಕೆ ಏನಿದ್ದರೂ ನೀರೆರೆಯುವಳು; ಅವನ ಸಲುವಾಗಿ.

ಒಂದು ದಿನ ಸಂಜೆ. ಬಿಸಿಲಮಾಳಿಗೆಯ ಮೇಲೆ ಈರ್ವರೇ ಮಾತ ನಾಡುತ್ತಾ ಕುಳಿತಿದ್ದರು. ಜಮೀನದಾರರು ಕೆಳಗಡೆ ರೈತರಲ್ಲಿ ಎದ್ದಿದ್ದ ಯಾವದೋ ಒಂದು ವ್ಯಾಜ್ಯವನ್ನು ಪರಿಹರಿಸುವುದರಲ್ಲಿ ನಿರತರಾಗಿದ್ದರು. ಇನ್ನಾರೂ ಇವರೀರ್ವರೇ ಮಾತನಾಡುತ್ತಿರುವ ಸಮಯದಲ್ಲಿ ತಲೆ ಹಾಕು ತ್ತಿರಲಿಲ್ಲ. ಇವರ ಮಾತಿಗೆ ಕೊನೆ ಮೊದಲಿಲ್ಲವಾಯಿತು. ಮಾತಿನಲ್ಲಿ ಮಾತು ಬೆಳೆದು ಮದುವೆಯ ವಿಷಯದಲ್ಲಿ ಚೆನ್ನಾಗಿ ಕದಡಿ ಆಡಿದ್ದಿತು. ಆತನಿಗೆ ಆಗ ಸ್ಮೃತಿ ತಪ್ಪಿರಬೇಕು. ಆಕೆಯನ್ನು ಗಾಢವಾಗಿ ಆಲಿಂಗಿಸಿ ಕೊಂಡು ಬಿಟ್ಟನು. ಆಕೆಗೆ ಒಮ್ಮೆಯೇ ಆಶ್ಚರ್ಯ, ಭಯ. ಮೈಯಲ್ಲಿ ನಡುಕ ಎದ್ದಿತು. ಆದರೆ ಏನು ಮಾಡಿಯಾಳು ? ಕೊನೆಗೆ ಆದುದೇನು ? ಮದುವೆ ಮಾಡಿಕೊಳ್ಳೋ ಬ್ರಾಹ್ಮಣ ಎಂದರೆ ನೀನೇ ಮಡದಿಯಾಗು ಎಂದು ಯಾವನೋ ಅಂದನಂತೆ. ಇಲ್ಲಿ ಆಕೆ ಮಡದಿಯೇ ಆದಳು ಈರ್ವರ ಮನವೂ ಬೆರೆತಿದ್ದಿತು. ಆ ವಿಷಮ ಸಮಯವು ಈರ್ವರ ತನು ಗಳನ್ನೂ ಒಟ್ಟುಗೂಡಿಸಿತು. ಒಟ್ಟುಗೂಡಿದ ಮೇಲೆ ಮುಂದಿನ ಆಲೋಚನೆ ಯಲ್ಲಿ ನಿರತರಾದರು. ಆದರೆ ಕಾರ್ಯ ಸಾಧನೆಯಾಗುವುದರೊಳಗಾಗಿಯೇ ಅದು ಬೇರೆ ವಿಧದಲ್ಲಿ ಸಾಧಿಸಿತು, ಪರಿಣಮಿಸಿತು.

ನಿಜ ಸಂಗತಿಯನ್ನು ಮುಚ್ಚಿಟ್ಟು ಆಕೆಗೆ ಬೇರೆಡೆಯಲ್ಲಿ ಮದುವೆಗೆ ಏರ್ಪಾಡುಗಳನ್ನು ಮಾಡತೊಡಗಿದರು. ಅವಳಿನ್ನೂ ಅರಿಯದ ಹುಡು ಗಿಯೇ ? ಅವಿವೇಕವು ನಡೆದುಹೋಯಿತೆಂದು ಅವಮಾನಿತಳಾಗಿ ಅವರ ಒಳಸಂಚುಗಳಿಗೆ ಬಗ್ಗಿ ಜೀವನವನ್ನು ಸಾಗಿಸಬೇಕೆ ? ಅವರನ್ನು ಧಿಕ್ಕರಿ ಸಿದಳು. ಆತನನ್ನು ನಾನು ಪತಿಯಾಗಿ ಸ್ವೀಕರಿಸಿದ್ದೆ. ಆತನು ಹತನಾದ ಮೇಲೆ ನಾನು ವಿಧವೆ. ವಿಧವೆಯಾಗಿಯೇ ಇದ್ದು ಆತನಿಂದುಂಟಾದ ಗರ್ಭವನ್ನು ಪೋಷಿಸುವೆನು. ಪುತ್ರನಾದರೆ ಹೆಮ್ಮೆಯಿಂದ ಅವನನ್ನು ಸಲಹುವೆನು. ನನ್ನ ಹೃದಯದ ಆರಾಧನಾಮೂರ್ತಿಯಾಗಿ ಪರಿಣಮಿಸಿದ್ದ ಅವರ ಪ್ರಸಾದದ ಆಶ್ರಯದಲ್ಲಿ ಜೀವವನ್ನು ಸವೆಸುವೆನು. ನನಗಾಗಿ ಅವರು ಹತರಾದರು. ಆ ಋಣವನ್ನು ನಾನೆಂದು ತೀರಿಸುವೆನೋ ನೋಡು

ವೆನು ಎಂದು ಹಟತೊಟ್ಟಳು. ಆ ಊರನ್ನು ತ್ಯಜಿಸಿ ಬೆಂಗಳೂರಿಗೆ ಬಂದು ತಮ್ಮ ಚಿಕ್ಕಪ್ಪನೊಂದಿಗೆ ಇರಲಾರಂಭಿಸಿದಳು. ಪುತ್ರರತ್ನವೇ ಆಯಿತು. ಆಕೆಯ ತಂದೆ ಓರ್ವಳೇ ಮಗಳಾದ ಅವಳನ್ನು ತ್ಯಜಿಸಿ ಎಂತು ಸುಖಿಯಾಗಿದ್ದಾನು? ಆದರೆ ಎಷ್ಟು ಬಲವಂತಪಡಿಸಿದರೂ ಆಕೆ ಹಿಂತಿರುಗಲು ಸಮ್ಮತಿಸಲಿಲ್ಲ. ಆದುದರಿಂದ ಅವನೇ ಬೆಂಗಳೂರಲ್ಲಿ ಒಂದು ಸಣ್ಣ ಬಂಗಲೆಯನ್ನು ಕೊಂಡುಕೊಟ್ಟು ಅಲ್ಲಿ ಅವಳಿಗೆ ಸಕಲ ಸಲಕರಣೆಗಳನ್ನೂ ಸಜ್ಜುಗೊಳಿಸಿ ಆಗಿಂದಾಗ್ಗೆ ಬಂದು ವಿಚಾರಿಸಿಕೊಳ್ಳುತ್ತಾ ತನ್ನ ಮಗಳು ಮತ್ತು ಮೊಮ್ಮಗನಿಗೆ ಯಾವ ವಿಧದಲ್ಲಿಯೂ ತೊಂದರೆ ತಾಪತ್ರಯಗಳಿಲ್ಲದಂತೆ ನೋಡಿಕೊಂಡು ಬರತೊಡಗಿದ. ಹಾಗೆಯೇ ನಡೆಯುತ್ತಾ ಬಂತು. ಒಟ್ಟಿನಲ್ಲಿ ಹಿಂದೆ ಹೇಳಿದಂತೆ ಮೂರ್ತಿಯೋರ್ವನೇ ಅನಾಥನಾದುದು. ದಿಕ್ಕೇ ಇಲ್ಲದವನಂತಾದುದು.

ಮೂರ್ತಿ ಎಂದಿನಂತೆ ಆ ದಿನವೂ ಅವರ ಮನೆಗೆ ಪಾಠಕ್ಕೆ ಹೋದ. ಹೋದಾಗ ಅವನ ಶಿಷ್ಯನ ತಾಯಿ ಮನೆಯ ಬಾಗಿಲಲ್ಲಿ ನಿಂತಿದ್ದಳು. ಅವನು ಅಲ್ಲಿಗೆ ಹೋದೊಡನೆಯೇ ಅವನನ್ನು ನೋಡಿ ಕೊಠಡಿಯ ಬಾಗಿಲನ್ನು ತೆರೆದು ತನ್ನ ಮಗನನ್ನು ಕರೆಯಲು ಒಳಕ್ಕೆ ಹೋದಳು. ಮೂರ್ತಿ ನೇರವಾಗಿ ಕೊಠಡಿಗೆ ಹೋಗಿ ಶಿಷ್ಯನು ಬಂದೊಡನೆಯೇ ಪಾಠಕ್ಕೆ ಮೊದಲು ಮಾಡಿದ. ಶಿಷ್ಯನು ಮೂರ್ತಿಯನ್ನು ಕುರಿತು "ಏನು ಸಾರ್, ಇಷ್ಟು ಹೊತ್ತು ಆಗಿ ಹೋಯಿತು, ಊಟ ಮಾಡಿಕೊಂಡು ಬಂದಿರೋ ಇಲ್ಲವೋ?" ಎಂದು ಕೇಳಿದ. "ಇಲ್ಲಪ್ಪ, ಕೆಲಸ ಬಹಳ ಇತ್ತು, ಎಲ್ಲೂ ಹೋಗುವದಾಗಲಿಲ್ಲ, ಸೀದಾ ಇಲ್ಲಿಗೇ ಹೊರಟು ಬಂದೆ" ಎಂದು ಮೂರ್ತಿ ಉತ್ತರ ಕೊಡಲು "ಏನು ಸಾರ್, ಸುಮ್ಮನೆ ಹೀಗೆ ಕಷ್ಟಪಡುತ್ತೀರಿ, ಎಲ್ಲಿಗೆ ಸಾರ್ ಇದರ ಕೊನೆ?" ಎಂದು ಕೇಳಿದ್ದಕ್ಕೆ ಮೂರ್ತಿ ನಿಟ್ಟುಸಿರನ್ನು ಬಿಟ್ಟು "ನಾನು ಕೊನೆಯಾದಾಗ ಅದೂ ಕೊನೆಯಾಗುತ್ತೆ. ಹೋಗಲಿ, ಇನ್ನು ಪಾಠ ಮೊದಲುಮಾಡು. ಎಲ್ಲಿ—ಪದ್ಯ ತೆಗೆದುಕೋ" ಎಂದು ಪಾಠ ಮೊದಲುಮಾಡಿದ.

ಪಾಠವು ಸಾಗುತ್ತಿತ್ತು. ಆಗಿಂದಾಗ್ಗೆ ಶಿಷ್ಯನ ತಾಯಿ ಬಾಗಿಲ ಬಳಿ ಸುಳಿದ ಹಾಗೆ ತೋರಿತು. ಪಾಠವು ಮೊದಲಾಗಿ ಕಾಲು ಘಂಟೆಗಳ ಕಾಲ

ನಡೆದಿತ್ತು. ಅಷ್ಟರಲ್ಲಿ ಶಿಷ್ಯನ ತಾಯಿ ಬಾಗಿಲ ಬಳಿಯೇ ಬಂದು ನಿಂತಳು. ಮೂರ್ತಿ ಶಿಷ್ಯನಿಗೆ "ನಿಮ್ಮ ತಾಯಿ ಯಾತಕ್ಕೋ ಬಂದಿದ್ದಾರೆ, ಹೋಗಿ ಕೇಳು—" ಎಂದು ಹೇಳಿದ. ಆಗ ಶಿಷ್ಯ "ಓ ಸಾರ್, ನಿಮ್ಮನ್ನು ನಮ್ಮ ತಾಯಿಯವರು ಒಂದು ವಿಷಯವನ್ನು ಕೇಳು ಎಂದಿದ್ದರು. ಮರತೇ ಬಿಟ್ಟಿದ್ದೆ. ಸಾರ್, ತಾವು ನಿನ್ನೆ ತಂದು ಇಲ್ಲಿ ಬಿಟ್ಟು ಹೋಗಿದ್ದಿರಲ್ಲಾ ಆ ಫೋಟೊ ತಮ್ಮ ತಂದೆಯವರದೇನಾ ಸಾರ್? ನಮ್ಮ ತಾಯಿ ಕೇಳು ಅಂದಿದ್ದರು" ಎಂದ. ಮೂರ್ತಿ ಹಿಂದಿನ ದಿನ, ತನ್ನ ತಂದೆಯ ಫೋಟೊ ವೊಂದು ಯಾರ ಮನೆಯಲ್ಲಿಯೋ ಇದ್ದುದನ್ನು ಕಂಡು ಅದನ್ನು ಅವರಿಂದ ತೆಗೆದುಕೊಂಡು ಅದರ ಎನ್‌ಲಾರ್ಜ ಒಂದನ್ನು ಮಾಡಿಸಿ ತೆಗೆದುಕೊಂಡು ಬಂದಿರಲು ಆ ದಿನ ಮಳೆ ಬರುವಂತೆ ಇರಲು ಶಿಷ್ಯನ ಮನೆಯಲ್ಲಿಯೇ ಅದನ್ನು ಬಿಟ್ಟು ಮನೆಗೆ ತೆರಳಿದ್ದ.

ಮೂರ್ತಿ— ಹೌದಪ್ಪ, ಯಾತಕ್ಕೆ ? ಎಂದು ಕೇಳಿದ.

ಶಿಷ್ಯ ತಾಯಿಯ ಕಡೆಗೆ ನೋಡಿದ. ಯಾರೂ ಉತ್ತರ ಕೊಡಲಿಲ್ಲ. ಮೂರ್ತಿ ತಲೆಯನ್ನು ತಗ್ಗಿಸಿಕೊಂಡಿದ್ದವನು ತಲೆಯೆತ್ತಿ ಶಿಷ್ಯನ ತಾಯಿಯನ್ನು ನೋಡಿದ. ಆಕೆ ಮೂರ್ತಿಯನ್ನೂ ದೃಷ್ಟಿಸಿ "ನಮಗೆ ಇಲ್ಲಿಯವರೆಗೂ ತಿಳಿದೇ ಇರಲಿಲ್ಲ" ಎಂದಳು. ಆಕೆಯ ನುಡಿಯಲ್ಲಿ ಆಳವಾದ ಹೃದಯಭೇದಕವಾದ ತಾನವಿದ್ದಿತು. ಮೂರ್ತಿಯೂ ಆಕೆಯೊಂದಿಗೆ ಎಂದೂ ಮಾತನಾಡಿರಲಿಲ್ಲ. ಆಕೆಯನ್ನು ಕಣ್ಣಾರೆ ನೋಡಿರಲಿಲ್ಲ. ತಾನು ತಂದೆತಾಯಿಯಿಲ್ಲದ ತಬ್ಬಲಿ ಎಂಬುದು ಆಕೆಗೆ ತಿಳಿದಿದ್ದಿತು. ಆದುದರಿಂದಲೇ ಈಗ ಈ ಭಾವಚಿತ್ರವನ್ನು ಕಂಡು ಕನಿಕರಗೊಂಡಿರಬೇಕು, ಆದರಿಂದಲೇ ವಿಚಾರಿಸಲು ಬಂದಿರಬೇಕು ಎಂದುಕೊಂಡು "ಹೌದು, ನನ್ನ ಸಂಗತಿಯನ್ನೆಲ್ಲವನ್ನೂ ನಾನು ತಮಗೆ ತಿಳಿಸಿಲ್ಲ. ನಾನು ತಮ್ಮ ಮನೆಯಲ್ಲಿ ಪಾಠಕ್ಕೆ ಮೊದಲು ಮಾಡುವ ಆರೇಳು ವರ್ಷಗಳ ಹಿಂದೆಯೇ ನಮ್ಮ ತಂದೆಯವರು ತೀರಿಕೊಂಡಿದ್ದರು" ಎಂದು ಹೇಳಿದ. ಅದನ್ನು ಕೇಳಿ ಆಕೆ ನಿಟ್ಟುಸಿರನ್ನು ಬಿಟ್ಟು ಬಾಗಿಲನ್ನು ಒರಗಿಕೊಂಡಿದ್ದನ್ನು ನೋಡಿದನು. "ಸ್ತ್ರೀಯರ ಹೃದಯ !" ಎಂದು ತಾನೂ ನಿಟ್ಟುಸಿರನ್ನು ಬಿಟ್ಟು ಮುಂದೆ ಪಾಠ ಮಾಡಲು ಪುಸ್ತಕವನ್ನು ತೆಗೆದುಕೊಂಡನು.

ಆದರೆ ಪಾಠ ಸಾಗಲಿಲ್ಲ. ಶಿಷ್ಯ " ಏನು ಸಾರ್, ಹಾಗಾದರೆ ನಿಮ್ಮ ತಂದೆಯವರು ತೀರಿ ಹೋದಾಗ ನೀವು ಚಿಕ್ಕವರಾಗಿದ್ದಿರಾ? ಅವರನ್ನು ನೋಡಿದ್ದಿರಾ ? ಹೇಳಿ ಸಾರ್, ನೀವು ನೋಡಿದ್ದಿರಾ ಅವರನ್ನು ? " ಎಂದು ಕೇಳಿದ. ಮರುಕ್ಷಣದಲ್ಲಿಯೇ ಆಕೆಯು ಅಲ್ಲಿ ಆ ನುಡಿಗಳನ್ನು ಆಲಿಸಿ ದುಃಖ್ಖಿಸಿಕೊಂಡು ಅಳುತ್ತಿರುವಂತೆ ಕಂಡಿತು. ಆಕೆ ತಡೆದ ದನಿಯಲ್ಲಿ " ಅವನು ಅವನ ತಂದೆಯನ್ನೇ ಕಾಣ, ಅದಕ್ಕೇ ಹಾಗೆ ಕೇಳುತ್ತಿದ್ದಾನೆ " ಎಂದಳು.

ಮೂರ್ತಿ " ಅಯ್ಯೋ ಪಾಪ, ಇವನಿಗೆ ತಂದೆ ಇಲ್ಲ ಎಂದಷ್ಟೇ ನನಗೆ ತಿಳಿದಿದ್ದಿತು. ಮೊದಲೇ ತೀರಿಹೋಗಿ ಬಿಟ್ಟಿದ್ದರೇನು ? " ಆಕೆ ಉತ್ತರ ಕೊಡಲಿಲ್ಲ. ತಲೆಯನ್ನು ತಗ್ಗಿಸಿದ್ದಳು. ಕಂಬನಿಯು ತೊಟ್ಟಿಕ್ಕುತ್ತಿತ್ತು. ಮೂರ್ತಿ ಅನ್ಯಾಯವಾಗಿ ನಾನಿವರ ಮನಸ್ಸನ್ನು ನೋಯಿಸುವಂತೆ ಮಾಡಿದೆ ನಲ್ಲಾ ಎಂದುಕೊಂಡು ಪಶ್ಚಾತ್ತಾಪಪಟ್ಟು ಶಿಷ್ಯನನ್ನು ಕುರಿತು " ಆ ಫೋಟೋ ಎಲ್ಲಿ ? " ಎಂದ. ಶಿಷ್ಯ ಡ್ರಾಯರಿಂದ ಫೋಟೋವನ್ನು ತೆಗೆದು ಮೇಜಿನ ಮೇಲಿಟ್ಟ. ಅದಕ್ಕೆ ಕಟ್ಟಿದ್ದ ಕಾಗದ ತೆಗೆದುಹಾಕಿದ್ದಿತು. ಮೂರ್ತಿ ತನ್ನ ತಂದೆಯ ಮೂರ್ತಿಯನ್ನದರಲ್ಲಿ ಕಂಡೊಡನೆಯೇ ಕಂಬನಿ ತುಂಬಿದ. ಅವನರಿಯದಂತೆಯೇ ಕಂಬನಿ ತುಂಬಿತು. ಅದನ್ನು ಬೇರೆ ಕಾಗದದಲ್ಲಿ ಕಟ್ಟಿಡಲು ಹೋದ. ಶಿಷ್ಯನ ತಾಯಿ ಶಿಷ್ಯನಿಗೆ ಸೂಚಿಸಿ ಅದನ್ನು ತೆಗೆದುಕೊಳ್ಳುವಂತೆ ಹೇಳಿದಳು.

ಶಿಷ್ಯ " ಸಾರ್, ನಮ್ಮ ತಾಯಿ ಫೋಟೋನ ಕೇಳುತಾರೆ '' ಅಂದ. ಇವನಿಗೆ ಮನಸ್ಸಿಲ್ಲದಿದ್ದರೂ ತೆಗೆದದನ್ನು ಅವನ ಕೈಯಲ್ಲಿ ಕೊಟ್ಟ. ಅವನಿಂದ ಆಕೆ ತೆಗೆದುಕೊಂಡು ಅದನ್ನೇ ನೋಡುತ್ತಾ ನಿಂತುಕೊಂಡಳು. ಒಂದು ಸಲ ಮೂರ್ತಿಯನ್ನು ನೋಡಿದಳು. ಮಗನನ್ನು ನೋಡಿದಳು. ಫೋಟೋದಲ್ಲಿರುವ ಮೂರ್ತಿಯನ್ನು ನೋಡಿದಳು. ಕೊನೆಗೆ ನಿಟ್ಟುಸಿರನ್ನು ಬಿಟ್ಟು, ಮೂರ್ತಿಯನ್ನು ಉದ್ದೇಶಿಸಿ " ನೀವು ನಿಮ್ಮ ತಂದೆಯನ್ನು ಕಣ್ಣಾರೆ ಕಂಡಿದ್ದಿರಿ. ಇವನಿಗೆ ಆ ಅದೃಷ್ಟವೂ ಇಲ್ಲ " ಎಂದಳು.

ಆ ಮಾತನ್ನು ಕೇಳಿದಾಗ ಮೂರ್ತಿಗೆ ಏನೋ ಭಾಸವಾಯಿತು. ಆಕೆಯನ್ನು ದಿಟ್ಟಿಸಿ ನೋಡಿದ. ಆಕೆ ತಲೆಬಾಗಿಸಿದಳು. ಪುನಃ ತಲೆಯೆತ್ತಿ ಮೂರ್ತಿಯ ಕಡೆ ನೋಡಿದಳು. ಮೂರ್ತಿಯ ದೃಷ್ಟಿ ಆಕೆಯ ದೃಷ್ಟಿ ಕಲೆಯಿತು. ಮೂರ್ತಿ ನೆಟ್ಟ ದೃಷ್ಟಿಯಿಂದ ಆಕೆಯನ್ನೇ ನೋಡುತ್ತಿದ್ದಾನೆ. ಆಕೆಯ ದೇಹ ಅದುರಿತು. ತೊದಲು ನುಡಿಯಲ್ಲಿ "ಇವನ ತಂದೆ ಇವರೆಂದು ಇವನಿನ್ನೂ ಅರಿಯ" ಎಂದಳು.

"ಏನು ?..." ಎಂದ ಮೂರ್ತಿ.

ಆಕೆ ಮಾತನಾಡಲಿಲ್ಲ.

ಮೂರ್ತಿ ಆಕೆಯನ್ನೇ ದೃಷ್ಟಿಸಿ ನೋಡಹತ್ತಿದ. ವೀರಶೈವ ಹೆಣ್ಣು ಮಗಳು. ಹಣೆಯಲ್ಲಿ ವಿಭೂತಿ ಧರಿಸಿದ್ದಾಳೆ. ತಲೆಯ ಮೇಲೆ ಸೆರಗಿದೆ. ಮುಖದ ಕಳೆ, ಆ ದೇಹ, ಮೈಕಟ್ಟು ಆಕೆ ಬ್ರಹ್ಮಚರ್ಯವ್ರತದಲ್ಲಿಯೇ ನಿರತಳಾಗಿದ್ದಂತೆ ಕಾಣುತ್ತಿದೆ. ಅಷ್ಟು ದಿನಗಳಿಂದ ಮೂರ್ತಿ ಅವರ ಮನೆಯಲ್ಲಿ ಪಾಠವನ್ನು ಹೇಳುತ್ತಿದ್ದರೂ ಅವರ ವಿಷಯಗಳೊಂದನ್ನೂ ಅರಿತಿರಲಿಲ್ಲ. ಆ ಮನೆಯಲ್ಲಿ ಬೇರೆ ಯಾರೂ ಗಂಡಸರಿರಲಿಲ್ಲ. ಒಬ್ಬ ಮುದುಕರು ಇವನೊಡನೆ ಮಾತನಾಡಿ ಗೊತ್ತು ಮಾಡಿದವರು. ಅವರು "ತನ್ನ ಮೊಮ್ಮಗನಿಗೆ" ಎಂದು ಹೇಳಿದ್ದರು. ಮೂರ್ತಿಗೆ ಸಂಬಳ ತಂದು ಕೊಡುತ್ತಿದ್ದವನೂ ಅವನ ಶಿಷ್ಯ. ಹೆಚ್ಚೇಕೆ, ಮೂರ್ತಿ ಆಕೆಯನ್ನು ಸರಿಯಾಗಿ ನೋಡಿದುದು ಈ ದಿನವೇ.

ಆಕೆ ಬರುತ್ತಿದ್ದ ದುಗುಡವನ್ನು ತಡೆಯುತ್ತಾ "ತಾವು ಮುಂದೆ ಇವನನ್ನು ನೋಡಿಕೊಳ್ಳಬೇಕು. ತಮ್ಮ ತಮ್ಮ ಇವನು."

"ಎನಂದಿರಿ ?" ಎಂದ ಮೂರ್ತಿ.

"ತಮ್ಮ ಹಿಂದಿನ ಕಷ್ಟಗಳಿಗೆ, ಮುಖ್ಯವಾಗಿ ತಮ್ಮ ಪಿತೃವಿಯೋಗಕ್ಕೆ ಕಾರಣ, ನಾನೇ, ನಾನಲ್ಲ ಈ ಹಾಳು ದೇಹ ...ಹೋಗಲಿ........ ತಾವು ಮುಂದೆ ಇಲ್ಲೇ ನೆಲಸಿ........." ಎಂದು ಆಡುತ್ತಿರುವಲ್ಲಿ ಮೂರ್ತಿ ಆಕೆಯನ್ನು ತಡೆದು "ನೀವು ! ಆ... ನೀವು !... ನಾನು ಈ ಮನೆಗೆ ಕಾಲಿಟ್ಟದ್ದು ತಪ್ಪಾಯಿತು... ಕೊಲೆಪಾತಕರ... ಅಯ್ಯೋ... .." ಎಂದು ಎದ್ದೊಡನೆಯೇ ಆ ಮನೆಯಿಂದ ಹೊರಟುಬಿಟ್ಟ.

ನೇರವಾಗಿ ತನ್ನ ಕೊಠಡಿಗೆ ಹೋದ. ಅಲ್ಲೂ ಇರಲು ಆಗಲಿಲ್ಲ. ಎದ್ದು ಪಾರ್ಕಿಗೆ ಹೋದ. ಅಲ್ಲಿ ತನ್ನ ಹಿಂದಿನ ದಿನಗಳೆಲ್ಲಾ ಜ್ಞಾಪಕಕ್ಕೆ ಬಂದವು. ತನ್ನ ತಂದೆಯ ಪ್ರೀತಿ, ಅವರು ಅವನ ಸಲುವಾಗಿ ಪಡುತ್ತಿದ್ದ ಕಷ್ಟ, ಎಲ್ಲವೂ ಒಂದೊಂದಾಗಿ ಅವನ ದೃಕ್‌ಪಟದಲ್ಲಿ ಸುಳಿದು ಸರಿಯಲಾರಂಭಿಸಿದವು. ಕೊನೆಗೆ, ಆಕೆ! ಆಕೆಯೇ ಕೊಲೆ ಪಾತಕಿ! ಮುಂದೆ ಏನೂ ಓಡದು. ಮನಸ್ಸು ಸೊನ್ನೆಯ ಮುದ್ದೆ ಯಾಯಿತು. ಸುಮ್ಮನೆ ಅಲೆದ. ರಾತ್ರಿ ಪೋಲೀಸಿನವರು ಬೀಟಿಗೆ ಬರುವ ವರೆಗೂ ಅಲೆಯುತ್ತಿದ್ದ. ಆ ಮೇಲೆ ಕೊಠಡಿಯ ಬಳಿಗೆ ಬಂದು ಮೆಲ್ಲಗೆ ಬೀಗವನ್ನು ತೆಗೆದು, ಹಾಸಿಗೆಯನ್ನು ಉರುಳಿಸಿ ಅದರ ಮೇಲೆ ಬಿದ್ದು ಕೊಂಡ. ನಿದ್ರೆ ಬಾರದು.

ಎದ್ದು ದೀಪವನ್ನು ಹಚ್ಚಿ ತನ್ನ ತಂದೆಯ ಫೋಟೊ ತೆಗೆದು ಕೊಂಡು ನೋಡತೊಡಗಿದ. ಅವನ ಪಕ್ಕದಲ್ಲಿ ಆಕೆಯ ಆಕೃತಿ ಕಾಣ ತೊಡಗಿತು. ಆಕೆಯ ಮುಖದಲ್ಲಿ ಏನು ಕಳೆ, ಏನು ತೇಜಸ್ಸು. ಹಾಗೆಯೇ ನೋಡುತ್ತಿದ್ದ. ತನ್ನ ಶಿಷ್ಯನ ನೆನಪು ಬಂತು. ಮನದಲ್ಲೊಂದು ಉದ್ವೇಗ ವೆದ್ದಿತು. ಆ ಶಿಷ್ಯ ಏನು ಮಾಡಿದ್ದ, ಅವನ ರೋಷಕ್ಕೆ ಪಾತ್ರನಾಗುವುದಕ್ಕೆ?

ಆ ರಾತ್ರಿ ಕಳೆಯಿತು. ಅವನು ಬೆಳಿಗ್ಗೆ ಏಳುವ ಹೊತ್ತಿಗಾಗಲೇ ಸೂರ್ಯ ಆಗಸದಲ್ಲೇರಿದ್ದ. ಹಾಗೆ ಹಾಸಿಗೆಯ ಮೇಲೆ ಕುಳಿತುಕೊಂಡು ಯೋಚನಾತರಂಗದಲ್ಲಿ ಮುಳುಗಿದ. ನಿನ್ನೆ ನಡೆದುದೆಲ್ಲಾ ಕನಸೇ! ಎಂಬ ಸಂದೇಹವೂ ಬರತೊಡಗಿತು. ಅಷ್ಟರಲ್ಲಿ ಯಾರೋ ಬಾಗಿಲನ್ನು ತಟ್ಟಿದ ಹಾಗಾಯಿತು. ಎದ್ದು ಬಾಗಿಲು ತೆಗೆದ. ಬಾಗಿಲಲ್ಲಿ ಅವನ ಶಿಷ್ಯ.

" ಸಾರ್, ಇವತ್ತು ಬೆಳಿಗ್ಗೆ ನಮ್ಮ ತಾತಾವರು ಬಂದರು. ಸಂಜೆಗೆ ಅವರು ಹೊರಟು ಹೋಗಿಬಿಡಬೇಕಂತೆ. ಈಗ ಕರೆದುಕೊಂಡು ಬರ ಹೇಳಿದರು. ನಿಮ್ಮ ಹತ್ತಿರ ಬಹಳ ಮಾತನಾಡುವುದು ಇದೆಯಂತೆ. ಬರು ತೀರಾ ಸಾರ್" ಎಂದು ಮೂರ್ತಿಯನ್ನು ಕೇಳಿದ. ಹೊರಗಡೆ ಅವನ ತಾತನ ಮೋಟರೂ ನಿಂತಿದ್ದಿತು.

ಮೂರ್ತಿ ಮಾತನಾಡದೆ ಮೂಕನಂತೆ ನಿಂತಿರಲು "ಏನು ಸಾರ್, ಯಾವಾಗ ಬರುತ್ತೀರಿ ಸಾರ್" ಎಂದು ಮತ್ತೆ ಕೇಳಿದ. ಅದಕ್ಕೆ ಮೂರ್ತಿ

"ಆಮೇಲೆ ಬರುತ್ತೀನಿ, ನೀನು ಹೋಗು" ಎಂದು ಹೇಳಿ ಕಳುಹಿಸಿಕೊಡಲು ಹೋದ.

"ಯಾವಾಗ ಬರುತ್ತೀರಿ ಎಂದು ಹೇಳಲಿ ಸಾರ್" ಎಂದು ಕೇಳಿದ್ದುದಕ್ಕೆ "ಬೆಳಿಗ್ಗೇನೇ ಬರುತ್ತೀನಿ...ಆಗದಿದ್ದರೆ ಸಂಜೆ ಎಂದಿನಂತೆ ಬರುತ್ತೀನಿ" ಎಂದು ಹೇಳಿ ಕಳುಹಿಸಿಕೊಟ್ಟ.

ಆದರೆ ಬೆಳಿಗ್ಗೆ ಮೂರ್ತಿ ಅವರ ಮನೆಗೆ ಹೋಗಲಿಲ್ಲ. ಹೋಗಲು ಆಗಗೊಡಲಿಲ್ಲ ಅವನ ಮನಸ್ಸು. ಆದರೆ ನಡುವೆ ನಡುವೆ ಹೋಗಿದ್ದರೆ ಆಗಿತ್ತು, ಅವರು ನನಗೆ ಎಷ್ಟು ಉಪಕಾರ ಮಾಡಿದ್ದಾರೆ ಎಂದೆನಿಸಿತು. ಮರುಕ್ಷಣದಲ್ಲಿಯೇ ತನ್ನ ತಂದೆಯ ಕೊಲೆ ಕಣ್ಣೆದುರಿಗೆ ಕಟ್ಟಿದಂತಾಗುವುದು. ಕೊಠಡಿಯನ್ನು ಜಾಗ್ರತೆಯಾಗಿಯೇ ಬಿಟ್ಟುಬಿಟ್ಟು ತನ್ನ ಕೆಲಸದ ಮೇಲೆ ಹೊರಟ. ಅಲ್ಲಿಗೆ ಶಿಷ್ಯನ ತಾತನಿಂದ ಕಾಗದ ಬಂತು. ಬೆಳಿಗ್ಗೆ ಅವರು ಅವನ ಕೊಠಡಿಗೆ ಹುಡುಕಿಕೊಂಡು ಬಂದಿದ್ದರೆಂದೂ ಸಂಜೆ ಖಂಡಿತ ಮನೆಗೆ ಬರಬೇಕೆಂದೂ ಬರೆದಿತ್ತು.

ಸಂಜೆಯೂ ಅವರ ಮನೆಗೆ ಹೋಗಲೇ ಬೇಡವೇ ಎಂಬ ತರ್ಕ ಮನದಲ್ಲೆದ್ದಿತು. ಮಲ್ಲೇಶ್ವರದ ಕಡೆಗೇನೋ ಕಾಲು ಹಾಕಿತು. ಅವರ ಮನೆಯ ಬಳಿಗೆ ಬಂದಾಗ ಮೋಟಾರು ಕಾರು ಮನೆಯ ಮುಂದೆ ನಿಂತಿದ್ದಿತು. ಹಾಗೇ ನೋಡಿಕೊಂಡು ಮುಂದಕ್ಕೆ ಹೊರಟುಬಿಟ್ಟ. ತಾತಾ ಇನ್‌ಸ್ಟಿಟ್ಯೂಟಿನ ವರೆಗೂ ಹೋದ, ಅಲ್ಲೆಲ್ಲಾ ಅಲೆದ.

ಅಲ್ಲಿ ಅಲೆಯುತ್ತಿರುವಾಗ ಆಕೆ ವಿಷಯದಲ್ಲಿ ಮನವು ಜಿಜ್ಞಾಸೆಗೆ ಆರಂಭಿಸಿತು. ಅಂದಿನಿಂದಲೂ ಅವರ ಮನೆಗೆ ಹೋಗಿ ಬರುತ್ತಿದ್ದಾನೆ. ಆಕೆಯು ಒಂದು ದಿನವೂ ಹೊರಗೆ ಕಾಣಿಸಿಕೊಳ್ಳುತ್ತಿರಲಿಲ್ಲ. ಅವನು ಅವರ ಮನೆಗೆ ಯಾವ ಹೊತ್ತು ಎಂದರೆ ಆ ಹೊತ್ತಿಗೆ ಹೋಗುತ್ತಿದ್ದ. ಅಲ್ಲಿಗೆ ಇತರರು ಆರೂ ಸುಳಿಯುತ್ತಿರಲಿಲ್ಲ. ಆಕೆಯಂತೂ ಹಗಲಿರುಳೂ ಪೂಜೆಯಲ್ಲಿ ನಿರತಳಾಗಿರುತ್ತಿದ್ದಳು. ಆಕೆ ನಿಶ್ಚಯವಾಗಿಯೂ ತಪಸ್ವಿನಿಯಂತೆ ಜೀವವನ್ನು ತಳ್ಳುತ್ತಿರಬೇಕು. ಇಲ್ಲದಿದ್ದರೆ ಮುಖದ ಮೇಲೆ ಆ ಕಳೆ ಎಲ್ಲಿಂದ ಬರಬೇಕು ?

ಇನ್ನು ತನ್ನ ತಂದೆಯ ಕೊಲೆ! ಕಾರಣಭೂತರು ಯಾರು? ತಪ್ಪು ಯಾರದು?

ವಾದವಿವಾದಗಳು ಹೊರಟವು.

ತಾನು ಆಗ ವರ್ತಿಸಿದ್ದು ತನಗೇ ಸರಿಯೇ? ಎಂಬ ಪ್ರಶ್ನೆಯೂ ಹುಟ್ಟಿಕೊಂಡಿತು.

ನಿಧಾನವಾಗಿ ಅವರ ಮನೆಯ ಕಡೆಗೆ ಕಾಲು ಎಳೆಯುತ್ತಿತ್ತು. ತಾನರಿಯದಂತೆಯೇ ತಾನು ಅವರ ಮನೆಯ ಬಳಿ ಬಂದು ನಿಂತಿರುವುದು ಭಾಸವಾಯಿತು. ಅಲ್ಲಿಗೆ ಅವನು ಬರುವ ಹೊತ್ತಿಗೆ ಅಲ್ಲಿಂದ ಮೋಟರು ಹೊರಟಿತು. ತಾತನವರು ಅವನಿಗೋಸ್ಕರ ಕಾದಿದ್ದು ತೆರಳಿರಬೇಕು. ಅವರು ಏನು ಇತ್ಯರ್ಥ ಮಾಡಬೇಕೆಂದಿದ್ದರೋ!

ಮೂರ್ತಿ ಎಂದಿನಂತೆ ಅವರ ಮನೆಯನ್ನು ಹೊಕ್ಕ. ಒಳಕ್ಕೆ ಹೆಜ್ಜೆಯಿಡುವುದಕ್ಕೂ ಅವನೇ ಕಾರಣನಲ್ಲ, ಬೇರೊಂದು ಶಕ್ತಿ ಅವನನ್ನು ಒಳಕ್ಕೆ ಒಯ್ದಿರಬೇಕು. ಮೂರ್ತಿ ಅವರ ಮನೆಯನ್ನು ಹೊಕ್ಕ. ಆದರೆ ಅವನು ಹಿಂತಿರುಗಿದಾಗ ಮನೆಯ ಮೇಸ್ಟರಂತೆ ಹಿಂತಿರುಗಲಿಲ್ಲ. ಮನೆಯವನಾಗಿ ಹೋಗಿದ್ದ. ಪುನಃ ಅಲ್ಲೇ ಬಂದು ನೆಲೆಸಲು ಹಿಂತಿರುಗಿದ.

---

# ಪಶ್ಚಾತ್ತಾಪ

೧

“ನಿಮ್ಮ ರಾಮು ಈಗ ಎಲ್ಲಿದ್ದಾನೆ, ಅವನ ವಿಷಯ ನೀವೇನೂ ಈಚೆಗೆ ಬರೀತಲೇ ಇಲ್ಲ” ಎಂದು ಅವನನ್ನು ವಿಚಾರಿಸಿ ನನ್ನ ಸ್ನೇಹಿತರನೇಕರು ನನಗೆ ಕಾಗದ ಬರೆದಿದ್ದರು. ನಾನು ಅವರಿಗೆ ಉತ್ತರ ಬರೆಯುವುದಕ್ಕೆ ನನಗೇ ಅವನ ವಿಷಯದಲ್ಲಿ ಹೆಚ್ಚಿಗೆ ಗೊತ್ತಿರಲಿಲ್ಲ. ಅವನು ನೆಲಮಂಗಲಕ್ಕೆ ವರ್ಗವಾಗಿ ಬಂದ ಲಾಗಾಯಿತು ಅವನಿಂದ ಒಂದು ಕಾಗದವೂ ಬಂದಿರಲಿಲ್ಲ. ನೋಡಿ, ಜನ ದೂರದಲ್ಲಿದ್ದಾಗ ಒಬ್ಬರಿಗೊಬ್ಬರು ಬರೆಯುವುದು ಹೆಚ್ಚು. ತಮ್ಮ ಹೃದಯವನ್ನೆಲ್ಲಾ ಬಿಚ್ಚಿ ಬರೆಯುತ್ತಿರುತ್ತಾರೆ. ಹತ್ತಿರ ಹತ್ತಿರಕ್ಕೆ ಬರುತ್ತ ಬರುತ್ತಾ ಬರೆಯುವುದೇ ತಪ್ಪಿಹೋಗುತ್ತೆ. ಒಂದೇ ಊರಿನಲ್ಲಿದ್ದರೆ ಒಬ್ಬರನ್ನೊಬ್ಬರು ಕಾಣುವುದೇ ದುರ್ಲಭವಾಗಿ ಹೋಗುತ್ತದೆಯೇನೋ! ಇದಕ್ಕೂ ನ್ಯೂಟನ್ನಿನ “ದಿ ಲಾ ಆಫ್ ಇನ್‌ವರ್ಸ್ ಸ್ಕ್ವೇಯರ್ಸ್” ಅನ್ವಯಿಸಬಹುದು.

ಅವರಿಗೆ ಉತ್ತರ ಏನೆಂದು ಬರೆಯುವುದು? ರಾಮುವಂತೂ ಸೌಖ್ಯವಾಗಿದ್ದಾನೆ. ಹಾಗೆಂದು ಬರೆದು ಬಿಡಲೇ? ಹಾಗೆ ಬರೆದರೆ ಅವರಿಗೆ ಏನು ತೃಪ್ತಿಯಾಗುವುದು! ಅವನಿಂದ ಯಾತಕ್ಕೆ ಕಾಗದ ಬರಲಿಲ್ಲ ಎಂದು ಯೋಚಿಸುತ್ತಾ ಕಚೇರಿಗೆ ಹೋದೆ.

ಅಲ್ಲಿಗೆ ಹೋಗಿ ನೋಡಿದರೆ ಅಲ್ಲಿ ನನಗೆ ಎರಡು ಕಾಗದಗಳಿವೆ—ರಾಮುವಿನಿಂದಲ್ಲ. ನನ್ನ ಸ್ನೇಹಿತರು ಕೆಲವರು ನನ್ನ ಕಚೇರಿಯ ವಿಳಾಸಕ್ಕೇ ಬರೆದು ಬಿಡುತ್ತಾರೆ. ಅದರ ಕಾರಣ ಬೇರೆ. ಅದಿರಲಿ. ಆ ಕಾಗದಗಳು ಅವರವು. ಅವುಗಳಲ್ಲಿಯೂ ರಾಮುವಿನ ವಿಷಯವನ್ನೇ ಕೇಳಿದ್ದರು. “ಇನ್ನು ಕಾಗದವಂತೂ ಬಂದಿಲ್ಲ. ರಜವನ್ನಾದರೂ ತೆಗೆದುಕೊಂಡು ಅಲ್ಲಿಗಾದರೂ ಹೋಗಿ ಬರಲೇ” ಎಂದೆನಿಸಿತು ಆ ಹೊತ್ತಿನಲ್ಲಿ. ಆದರೆ ಆಗ

ಕಚೇರಿಯ ಕೆಲಸ ಮೊದಲಾಯಿತು, ಹೊರ ಪ್ರಪಂಚವೇ ಮರೆತು ಹೋಯಿತು.

ಸಂಜೆ ಮನೆಗೆ ಬಂದೆ. ಬರುತ್ತಿರುವಾಗ ಅದೇ ಯೋಚನೆ. ಅಲ್ಲದೆ, ಪ್ರತಿವಾರದಲ್ಲಿಯೂ ಈ ದಿನವೇ ನಾನು ಎಲ್ಲರಿಗೂ ಕಾಗದ ಬರೆಯುವ ದಿನ. ಮಾರನೆಯ ದಿನ ಕಚೇರಿಯಿರುವುದಿಲ್ಲ. ಕೆಲಸದ ಹಂಬಲ ಅಷ್ಟಿರುವುದಿಲ್ಲ.

ಮನೆಗೆ ಬಂದೆ. ಬಂದಾಗ ಏಳು ಗಂಟೆ. ಹಾಗೇ ತಿರುಗಾಡಿಕೊಂಡು ಬಂದಿದ್ದೆ. ಬಂದು ಕೊಠಡಿಯಲ್ಲಿ ಕುಳಿತೆ ಮೇಜಿನ ಮುಂದೆ.

ಸಮ್ಮವರು ಆಗ ಕೊಠಡಿಯಲ್ಲಿ ಕಸೂತಿ ಹಾಕುತ್ತಾ ಕುಳಿತಿದ್ದರು. ನಾನು ಬಂದೊಡನೆಯೇ ಎದ್ದು ಹೊರಡುವುದರಲ್ಲಿ ಇದ್ದರು. ನಾನೇ ಅವರನ್ನು ತಡೆದು "ನಾನು ಹೋದ ಮೇಲೆ ಟಪಾಲಿನಿಂದ ಯಾವುದಾದರೂ ಕಾಗದ ಬಂತೇ?" ಎಂದು ಕೇಳಿದೆ.

"ಯಾವಾಗಲೂ ಏನು ಕಾಗದ, ಕಾಗದ ಅಂತಿರುತ್ತೀರಿ. ಇನ್ನು ಕಾಗದಗಳನ್ನು ಬೇರೆ ಬರೀತಾ ಕೂಡಬೇಕೇನೋ. ಈಗ ಕಾಫಿ ತರಲೋ, ಊಟಮಾಡಿ ಕುಳಿತುಕೊಳ್ಳುತ್ತೀರೋ?"

"ನೋಡೆ, ರಾಮು ಇಂದ ಈಚೆಗೆ ಕಾಗದಗಳೇ ಬಂದಿಲ್ಲ."

"ಸರಿ, ಸರಿ."

"ಅಲ್ಲವೇ, ಅವನ ವಿಷಯವೇ ಇಲ್ಲ. ಒಂದು ಕಾಗದಾನು ಬಂದಿಲ್ಲ."

"ಏನು ನಿಶ್ಚಯವಾಗಿಯೂ ಬಂದಿಲ್ಲವಾ?"

"ಎಲ್ಲಿ ಬಂತೇ, ನೀನೇ ಬಂದಿದ್ದೆಲ್ಲಾ ನೋಡುತ್ತಿದ್ದಿ. ನನ್ನ ಪ್ರೈವೇಟು ಸೆಕ್ರೆಟರಿ. ಇನ್ನು ಎಲ್ಲರೂ ಕೇಳುತ್ತಿದ್ದಾರೆ. ಏನು ಬರೀಬೇಕು?"

"ಯಾರು ನಿಮ್ಮ ರಾಮರಾಯರ ವಿಚಾರವಾ? ಸೀತಮ್ಮನವರು ಚೆನ್ನಾಗಿದ್ದಾರಾ!"

* * *

"ಏನು ಬಹಳ ಯೋಚಿಸುತಿದ್ದೀರಿ?"

* * *

" ಯಾಕೆ, ನಾನು ಕಾಗದ ಬರಸಿಬಿಡಲಾ. ಏನು ಕೊಡುತೀರಿ ?"

* * *

" ಯಾಕೆ, ನಾನು ಕಾಗದ ಕೊಡುತ್ತೀನಿ. ಏನು ಕೊಡುತೀರಿ ಹೇಳಿ ? "

" ನಿಶ್ಚಯುವಾಗಿಯೂ ಕಾಗದ ಬಂದಿದೆಯಾ ? ಎಲ್ಲಿ ಕೊಡು, ನೀನು ಕೇಳಿದ್ದು ಕೊಡುತೀನಿ — ಬಹುಮಾನ. "

" ಹಾಗಾದರೆ ಕಾಫಿ ತರುತೀನಿ. ಕಾಫಿ ಕುಡಿದು ಆ ಮೇಲೆ ಕಾಗದ ಓದುವಿರಂತೆ. "

" ಸುಳ್ಳು. ಕಾಗದ ಬಂದಿಲ್ಲ. "

" ಬಂದಿಲ್ಲವಾ ?........."

" ಇಲ್ಲ. ಬಂದಿದೆ. ಎಲ್ಲಿ ಕೊಡು. "

" ಬಂದೆ. ಕಾಫಿ ತರುತೀನಿ. ಕೊಡಬೇಕು ನಾನು ಕೇಳಿದ್ದನ್ನ ಬಹುಮಾನಾನ. "

" ಆಗಲಿ ಎಲ್ಲಿ ಮತ್ತೆ. "

ಕಾಫಿಯು ಬಂತು. ಕಾಫಿಯೊಡನೆ ಕಾಗದವೂ ಬಂತು. ಬರುವು ದೇನು. ಅವರ ಮಡಲಿನಲ್ಲಿಯೇ ಇತ್ತು.

ಬಹಳ ದೊಡ್ಡ ಕಾಗದ ಬರೆದಿದ್ದಾನೆ. ಓದ ತೊಡಗಿದೆ.

" ಕಾಫಿ ಆರಿಹೋಗುತ್ತೆ ಕುಡಿದು ಬಿಟ್ಟು ಓದುವಿರಂತೆ. ಅದಕ್ಕೇ ನಾನು ಕೊಡಬಾರದಾಗಿತ್ತು ಕಾಗದಾನ ಮೊದಲೇ. "

ನಾನು ಅದನ್ನು ಸಂಪೂರ್ಣ ಓದುವ ವರೆಗೂ ಮನಸ್ಸು ನಿಲ್ಲಲಿಲ್ಲ.

" ಏನು, ಅಷ್ಟು ಮಗ್ನಮನಸ್ಕರಾಗಿ ಓದುತ್ತಿದ್ದೀರಿ. ಏನು ಸಮಾಚಾರ, ಇಲ್ಲಿ ಕೊಡಿ ಇಲ್ಲಿ" ಎಂದು ಅವರದನ್ನು ತೆಗೆದುಕೊಂಡು ಓದ ತೊಡಗಿದರು.

ಅವನು ಅದರಲ್ಲಿ ಬರೆದಿರುವ ವಿಷಯ ಬಹಳ ಗಹನವಾದ ವಿಚಾರವೇ. ಎಲ್ಲರಿಗೂ ತಿಳಿಯುವಂತೆ ಅದನ್ನು ಇಲ್ಲಿ ಆದಷ್ಟು ಮಟ್ಟಿಗೆ ವಿಸ್ತಾರವಾಗಿ ನನ್ನ ಮಾತಿನಲ್ಲಿ ನನಗೆ ತೋರಿದ ಹಾಗೆ ಹೇಳುತ್ತೀನಿ.

೨

ಗೋಪಾಲಯ್ಯ ರಾಮುವಿನ ಕಚೇರಿಯಲ್ಲಿ ಒಬ್ಬ ಗುಮಾಸ್ತ. ಅವನು ಕೆಲಸಕ್ಕೆ ಸೇರಿ ಒಂದು ವರ್ಷ ಕೂಡ ಆಗಿರಲಿಲ್ಲ. ನೆಲವಂಗಲದ ಬಳಿಯಲ್ಲಿಯೇ ಒಂದು ಹಳ್ಳಿ ಅವನ ಸ್ಥಳ. ಅವನ ತಂದೆ ತಾಯಿ ಅವನ ಚಿಕ್ಕಂದಿನಲ್ಲಿಯೇ ತೀರಿಕೊಂಡು ಬಿಟ್ಟಿದ್ದರು. ಆದರೂ ಅವನು ಹಾಗೂ ಹೀಗೂ ಮಾಡಿ ಎಸ್. ಎಸ್. ಎಲ್. ಸಿ. ಪರೀಕ್ಷೆಯನ್ನು ಮಾಡಿದ. ಅಷ್ಟರಲ್ಲಿಯೇ ಅವನಿಗೆ ಮದುವೆಯೂ ಆಯಿತು. ಹಳ್ಳಿಗಳ ಕಡೆ ಕೇಳಬೇಕೇ! ಐದು ರೂಪಾಯಿ ಪರೀಕ್ಷೆ ಮಾಡಿದೊಡನೆಯೇ ಯಾರಾದರೂ ಒಂದು, ಹೇಗಾದರೂ ಮಾಡಿ ಹಕ್ಕಿಯನ್ನು ಬಲೆಗೆ ಹಾಕಿಕೊಂಡು ಬಿಡುತ್ತಾರೆ. ಇವನು ಎಸ್ ಎಸ್. ಎಲ್. ಸಿ. ಪರೀಕ್ಷೆ ಮಾಡುವ ಹೊತ್ತಿಗೆ ಹುಡುಗಿಯು ದೊಡ್ಡವಳಾಯಿತು. ಅವನ ಮಾವನ ಮನೆಯವರು ಹದಿನಾರು ದಿವಸಗಳಲ್ಲಿಯೇ ಪ್ರಸ್ತವನ್ನು ಮಾಡಿಕೊಳ್ಳಬೇಕೆಂದು, ಒಸಗೆಯನ್ನು ಕಳುಹಿಸಿದರು. ಹಳ್ಳಿಗಳ ಕಡೆ ನೋಡಿ, ಚಿಕ್ಕಂದಿನಲ್ಲಿಯೇ ಹುಡುಗಿಯರನ್ನು ಅವರ ತಲೆಗೆ ಕಟ್ಟಿಹಾಕುವುದಿರಲಿ, ಹುಡುಗಿಯು ನೆರೆದ ಹದನಾರು ದಿವಸಗಳಲ್ಲಿಯೇ ನಿಷೇಕಪ್ರಸ್ತವನ್ನು ಜರುಗಿಸಿ ಬಿಡುತ್ತಾರೆ. ಅವರಿಗೆ ವಿವೇಚನೆ ಇರುವುದಿಲ್ಲವೆಂತಲೇ? ಹಿರಿಯರು ತಮ್ಮ ಅನುಭವದಿಂದಾದರೂ ಆ ಪದ್ಧತಿಯನ್ನು ನಿಲ್ಲಿಸಬಾರದೇ? ಕಟ್ಟಳೆ! ಕಟ್ಟಳೆ!

ಗೋಪಾಲಯ್ಯ ಎಷ್ಟಾದರೂ ಓದಿದವನು. ಅವನು ಅವರ ಮಾತಿಗೆ ಕಿವಿಗೊಡಲಿಲ್ಲ ತನಗೆ ಕೆಲಸವಾಗಿ ಒಂದು ಕಡೆ ಸರಿಯಾಗಿ ಕುಳಿತುಕೊಳ್ಳುವ ವರೆಗೆ ಆಗದು ಅಂದು ಬಿಟ.

ಇನ್ನು ಬೀಗರು ಅವನ ಅಣ್ಣನ ಮೇಲೆ ತಿರುಗಿ ಬಿದ್ದರು. “ನೀವು ತಾನೆ ಮದುವೆಯನ್ನು ಮಾಡಿಸಿದವರು. ಇನ್ನು ಹುಡುಗಿಯನ್ನು ನೀವೇ ಕರೆದುಕೊಂಡು ಹೋಗಿ ಇರಿಸಿಕೊಳ್ಳಿ. ದೊಡ್ಡವಳಾದ ಹುಡುಗಿಯನ್ನು ಮನೆಯಲ್ಲಿ ಇಟ್ಟುಕೊಂಡು ಅಕ್ಕಪಕ್ಕದವರು ಅಲ್ಲಗಳೆಯುವುದನ್ನು ನಾವು ಕೇಳಲಾರೆವು” ಎಂದು ಅವನ ಅಣ್ಣನನ್ನು ಬಾಧಿಸತೊಡಗಿದರು. ಅವನ ಅಣ್ಣನಿಗೂ ಅವನು ಓದಿ ಮುಂದಕ್ಕೆ ಬರಲೆಂದು ಆಸೆಯಿದ್ದಿತು. ಆದರೆ ಅವನೂ ಈ ಸಂದರ್ಭದಲ್ಲಿ ಏನನ್ನೂ ಮಾಡಲಾರದೇ ಹೋದ. ಕೊನೆಗೆ

ರಾಮುವಿನ ಆಫೀಸಿನಲ್ಲಿ ಅವನಿಗೆ ದಮ್ಮಯ್ಯ ಗುಡ್ಡೆಯಿಟ್ಟು, ಒಂದು ಸಣ್ಣ ನೌಕರಿಯನ್ನು ಸಂಪಾದಿಸಿ ತಮ್ಮನಿಗೆ 'ನೋಡು, ಕಾಲಸ್ಥಿತಿ ಬಹಳ ಕೆಡುತ್ತಾ ಇದೆ ಎಷ್ಟು ಓದಿದರೂ ಕೆಲಸಗಳು ಸಿಕ್ಕುವುದೇ ಅಭಾವ. ಈಗೇನೋ ನಮ್ಮ ಅಮಲ್‌ದಾರರು ನಮ್ಮ ಮೇಲೆ ಕರುಣವಿಟ್ಟು ಒಂದು ಕೆಲಸವನ್ನು ಮಾಡಿಕೊಡಬೇಕೆಂದಿದ್ದಾರೆ. ಅವರು ಅಷ್ಟು ದೊಡ್ಡ ಮನಸ್ಸನ್ನು ಮಾಡಿರುವುದೇ ಹೆಚ್ಚು. ಈಗ ಒಪ್ಪದೇ ಹೋದರೆ ಮುಂದೆ ನಮಗೆ ಯಾರು ಆಗುತ್ತಾರೆ? ಈಗೇನು ನೀನು ಒಪ್ಪುತ್ತೀಯೋ ಇಲ್ಲವೋ ಹೇಳು' ಎಂದು ಅವನಿಗೆ ಯೋಚಿಸುವುದಕ್ಕೂ ಅವಕಾಶ ಕೊಡದೆ ಅವನ ಮೇಲೆ ಕುಳಿತುಕೊಂಡು ಕೊನೆಗೆ ಅವನನ್ನು ರಾಮು ಕಚೇರಿಗೆ ಸೇರಿಸಿಬಿಟ್ಟರು.

ಅವನ ಮುಂದಿನ ಆಸೆಗಳೆಲ್ಲಕ್ಕೂ ಅವನು ತಿಲಾಂಜಲಿಯನ್ನೀಯಬೇಕಾಯಿತು. ಇದ್ದಿದ್ದರಲ್ಲಿ ಬುದ್ಧಿವಂತ. ಎಲ್ಲೆಲ್ಲಿಯೂ ಒಳ್ಳೆಯ ಹೆಸರನ್ನೇ ತೆಗೆದುಕೊಂಡಿದ್ದ. ಮುಂದೆ ಅದು ಮಾಡಬೇಕು, ಇದು ಮಾಡಬೇಕು, ಎಂದು ಅವನಿಗಿದ್ದ ಹುಮ್ಮಸ್ಸೆಲ್ಲವೂ ನೀರಿನಲ್ಲಿ ಹೋಮ ಮಾಡಿದಂತಾಯಿತು.

ಅವನ ಊರು ನೆಲಮಂಗಲದ ಹತ್ತಿರದಲ್ಲಿಯೇ ಇತ್ತು ಎಂದು ಹೇಳಿದೆನಲ್ಲಾ, ಅವನು ಪ್ರತಿನಿತ್ಯವೂ ಊರಿನಿಂದಲೇ ಕಚೇರಿಗೆ ಬಂದು ಕಚೇರಿ ಮುಗಿಯಲು ಊರಿಗೆ ಹೊರಟು ಹೋಗುತ್ತಿದ್ದನು. ಕಚೇರಿಯಲ್ಲೋ ಅವನು ತನ್ನ ಪಾಡಿಗೆ ತನ್ನ ಕೆಲಸವನ್ನು ನೋಡಿಕೊಂಡು ಹೋಗಿ ಬಿಡುವನು. ಮೊದಲು ಅವನ ಶಾಲೆಗಳಲ್ಲಿ ಅವನು ತೋರಿಸುತ್ತಿದ್ದ ಹುಮ್ಮಸ್ಸು, ಓಡಾಟ ಎಲ್ಲಾ ಎಲ್ಲಿಗೆ ಹೋಗಿ ಬಿಟ್ಟಿತೋ. ಅವನ ಮುಖವನ್ನು ಅಲ್ಲಿ ಯಾರಾದರೂ ನೋಡಿದ್ದೇ ಆದರೆ ಅದರ ಮೇಲೆ ನಿತ್ಯ ವೈರಾಗ್ಯದ ಕಳೆಯು ಚೆನ್ನಾಗಿ ಆವರಿಸಿಕೊಂಡಿರುವಂತೆ ಕಾಣುತ್ತಿದ್ದಿತಂತೆ.

ಒಂದು ದಿನ ರಾಮು ಗೋಪಾಲಯ್ಯನಿಗೆ ಯಾವುದೋ ಒಂದು ಕೆಲಸವನ್ನು ಹೇಳಿದ್ದನಂತೆ. ಗೋಪಾಲಯ್ಯ ಅವನು ಹೇಳಿದ್ದಂತೆಯೇ ಮಾಡಿದರೆ ಆ ಕೆಲಸವು ಸಫಲವಾಗುತ್ತಿರಲಿಲ್ಲ. ಗೋಪಾಲಯ್ಯ ಅಲ್ಲಿ ತನ್ನ ಬುದ್ಧಿವಂತಿಕೆ ಉಪಯೋಗಿಸಿದ. ಅವನಿಗೆ ಒಂದು ವಿಷಯ ತಿಳಿಯದು.

ರಣರಂಗದಲ್ಲಿ ಸಿಪಾಯಿಗಳು ಅವರ ಸೇನಾಧಿಪತಿ ಏನು ಅಪ್ಪಣೆ ಕೊಟ್ಟರೆ ಅದರಂತೆ ತಾವು ಕಣ್ಣು ಮುಚ್ಚಿಕೊಂಡು ಹೇಗೆ ನುಗ್ಗುತ್ತಿರಬೇಕೋ ಹಾಗೆ ಸರ್ಕಾರಿ ನೌಕರಿಯಲ್ಲಿ ಮೇಲಿನ ಅಧಿಕಾರಿಯು ಏನು ಹೇಳಿದರೆ ಆ ಹೊತ್ತಿನಲ್ಲಿ ತಾನು ಹಿಂದುಮುಂದು ನೋಡದೆ ಅದರಂತೆ ಮಾಡಿಬಿಡಬೇಕು; ಆ ಮೇಲೆ ಮುಂದಿನ ವಿಷಯ ಎನ್ನುವುದನ್ನು ಅರಿಯ.

ರಾಮೂಗೆ ಅವನ ಮೇಲೆ ಬಹಳ ಸಿಟ್ಟು ಬಂತು. ಆ ಹೊತ್ತಿನಲ್ಲಿ ತನ್ನ ಮಿತಿಮೀರಿ ಮಾತನಾಡಿಬಿಟ್ಟ. ಗೋಪಾಲಯ್ಯ ಯಾವುದೊಂದೂ ಹೇಳದೆ ಆ ಕೊಠಡಿಯಿಂದ ಹೊರಗೆ ಬಂದು ಬಿಟ್ಟ.

ಆ ದಿನ ಕಳೆದುಹೋಯಿತು. ಮಾರನೆಯ ದಿನ ರಾಮೂಗೆ ಅನ್ನಿಸಿತು, ತಾನು ಅಷ್ಟು ಆಡಿದ್ದು ತಪ್ಪು ಎಂದು. ಗೋಪಾಲಯ್ಯ ಅಂದಿನಿಂದ ರಜಕ್ಕೆ ಬರೆದುಕೊಂಡಿದ್ದವನು ರಜವನ್ನು ವಜ ಮಾಡಿಸಿಕೊಂಡು ಬಿಟ್ಟ. ಅವನ ಮನಸ್ಸಿನ ಮೇಲೆ ಸೇವಾವೃತ್ತಿಯ ಕೂರ್ಮೆನೆಯ ಪೆಟ್ಟು ಚೆನ್ನಾಗಿ ತಾಗಿದ್ದಿತು.

ರಾಮು ಹೇಗಾದರೂ ಮಾಡಿ ಗೋಪಾಲಯ್ಯನಿಗೆ ಎರಡು ಸಮಾಧಾನದ ಮಾತುಗಳನ್ನು ಹೇಳಬೇಕೆಂದು ಕಚೇರಿಯಲ್ಲಿ ನಾಲ್ಕೈದು ಸಲ ಅವನಿಗೆ ಹೇಳಿ ಕಳುಹಿಸಿದ. ಆದರೆ ಗೋಪಾಲಯ್ಯ ಇವನ ಕೊಠಡಿಗೆ ಬರುವನು, ಇವನು ಆ ಸುದ್ದಿಯನ್ನು ಎತ್ತಿದರೆ ಮೆಲ್ಲಗೆ ಅಲ್ಲಿಂದ ಹೊರಟು ಬಂದು ಬಿಡುವನು. ಒಂದು ಸಲವೂ ರಾಮು ಇಚ್ಛೆ ಪೂರೈಸಲಿಲ್ಲ.

ಆದಾದ ಹತ್ತು ಹದಿನೈದು ದಿವಸಗಳ ಮೇಲೆ ಗೋಪಾಲಯ್ಯ ಒಟ್ಟಿಗೆ ಒಂದು ವಾರ ರಜಕ್ಕೆ ಬರೆದುಕೊಂಡ. ರಾಮು "ಯಾತಕ್ಕೆ ? ಏನು ?" ಎಂದು ಎಲ್ಲಿ ಏನಾದರೂ ಕೇಳಿದರೆ ಇನ್ನು ಪುನಃ ನೊಂದುಕೊಂಡು ಬಿಡುತ್ತಾನೆಯೋ ಎಂದು ಯಾವುದನ್ನೂ ವಿಚಾರಿಸದೆ ರಜವನ್ನು ಮಟ್ಟಿಗೆ ಮಂಜೂರು ಮಾಡಿಬಿಟ್ಟ.

ಗೋಪಾಲಯ್ಯ ರಜದ ಮೇಲೆ ಹೋಗಿ ಮೂರು ನಾಲ್ಕು ದಿನಗಳಾಗಿದ್ದವು. 'ಯಾತಕ್ಕೆ ಅವನು ರಜವನ್ನು ತೆಗೆದುಕೊಂಡ ?' ಎನ್ನುವುದು ರಾಮೂಗೆ ಗೊತ್ತಾಗಿರಲಿಲ್ಲ. 'ಯಾತಕ್ಕೆ ಇರಬಹುದು ? ಎಲ್ಲಿಯಾದರೂ ಕಾಹಿಲೆ ಬಿದ್ದು ಬಿಟ್ಟಿದ್ದಾನೆಯೇ' ಎಂದು ಯೋಚಿಸುತ್ತಾ ಅವರ ಊರ

ಕಡೆ ಆ ದಿನ ಸಂಜೆ ಗಾಳಿ ಸಂಚಾರಾರ್ಥವಾಗಿ ಬಂದಿದ್ದವನು, ಹಾಗೇ ಗೋಪಾಲಯ್ಯನನ್ನು ವಿಚಾರಿಸಿಕೊಂಡೇ ಹೋಗೋಣವೆಂದು ರಾಮು ಅವರ ಮನೆಯ ಕಡೆಗೆ ತಿರುಗಿದ. ಅವರ ಮನೆಯಲ್ಲಿ ಓಲಗದ ಸದ್ದು ಕೇಳಿಸಿತು. 'ಸರಿ ಏನೋ ಹೆಚ್ಚು ಗಟ್ಟಳೆ ಇರಬೇಕು. ಅವನು ಕಾಹಿಲೆ ಗೀಹಲೆ ಏನೂ ಬಿದ್ದಿಲ್ಲವಲ್ಲ' ಎಂದುಕೊಂಡು ಅಲ್ಲಿಂದ ಹೊರಡಬೇಕೆಂದು ತಿರುಗಿದ. ಆದರೆ ಅದು ಅಲ್ಲಿಗೆ ಆಗುತ್ತದೆಯೇ! ಹಳ್ಳಿಗೆ ಅಮಲದಾರರು ಬಂದ ಮೇಲೆ ಹಾಗೆ ಹಿಂತಿರುಗಿ ಹೋಗಲು ಹಳ್ಳಿಯವರು ಬಿಡುವರೇ! ಅವನು ಊರೊಳಕ್ಕೆ ಬಂದೊಡನೆಯೇ ಅಮಲದಾರರು ಬಂದಿದ್ದಾರೆ ಎನ್ನುವ ಸುದ್ದಿ ಅರೆನಿಮಿಷದಲ್ಲಿ ಊರಲ್ಲೆಲ್ಲಾ ಹರಡಿಬಿಟ್ಟಿದ್ದಿತು. ಆ ಊರಿನ ಶಾನುಭೋಗರಾದ ಗೋಪಾಲಯ್ಯನ ಅಣ್ಣ, ಆ ಊರಿನ ಪಟೇಲ, ಎಲ್ಲರೂ ಅವನನ್ನು ಎದುರುಗೊಳ್ಳಲು ಬಂದರು. ಅವನ ಬಳಿಗೆ ಬಂದು "ಇಷ್ಟು ದೂರ ಸವಾರಿ ದಯಮಾಡಿಸಿರೋಣವಾಯಿತಲ್ಲಾ?" ಎಂದು ಕೇಳಿದರು.

"ಹೀಗೆ ಸಾಯಂಕಾಲ ಬಂದಿದ್ದೆ. ಇಲ್ಲಿಗೆ ಬಂದವನು ಗೋಪಾಲಯ್ಯನನ್ನು ವಿಚಾರಿಸಿಕೊಂಡು ಹೋಗಿ ಬಿಡೋಣವೆಂದು ಬಂದೆ. ಇದ್ದಾನೆಯೋ ಮನೆಯಲ್ಲಿ?"

"ಇದ್ದಾನೆ ಸಾರ್, ದಯಮಾಡಿಸಬೇಕು, ಬಡವರ ಮನೆ."

"ಏನು ಮಾಡುತ್ತಿದ್ದಾನೆ?"

ಯಾರೂ ಉತ್ತರ ಕೊಡಲಿಲ್ಲ. ಕೆಲವರು ಹುಸಿ ನಗೆ ನಕ್ಕಿರಬಹುದು. ಆದರೂ ಅಮಲದಾರರು! ಧೈರ್ಯ ಇಲ್ಲ.

ಎಲ್ಲರೂ ಗೋಪಾಲಯ್ಯನ ಮನೆಗೆ ಬಂದರು. ಗೋಪಾಲಯ್ಯನ ಅಣ್ಣ "ಒಳಕ್ಕೆ ದಯಮಾಡಿಸಬೇಕು" ಎಂದು ವಿನಯದಿಂದ ವಿಜ್ಞಾಪಿಸಿಕೊಂಡರು. ಒಳಗಡೆ ಮುತ್ತೈದೆಯರು, ಬ್ರಾಹ್ಮಣರು ಎಲ್ಲರೂ ಕಲೆತಿದ್ದರು. ಹಸೆಯ ಜಗುಲಿಯ ಬಳಿ ಪುರೋಹಿತರು. ರಾಮು ಇದನ್ನೆಲ್ಲಾ ನೋಡಿ "ಇಲ್ಲಪ್ಪ, ಇನ್ನು ಒಳಕ್ಕೆ ಬಂದರೆ ಹೊತ್ತಾಗುತ್ತೆ. ಗೋಪಾಲಯ್ಯನ್ನ ಕರೆಯಿರಿ. ಮಾತನಾಡಿಕೊಂಡು ಹೊರಟುಹೋಗುತ್ತೇನೆ" ಎಂದ.

ಗೋಪಾಲಯ್ಯನ ಅಣ್ಣ "ಬಡವರ ಮೇಲೆ ದಯವಿಟ್ಟು ಒಳಕ್ಕೆ ದಯಮಾಡಿಸಿ ತಾಂಬೂಲವನ್ನು ಸ್ವೀಕರಿಸಿ ಮುಂದಕ್ಕೆ ತೆರಳಬಹುದು

ಸಾರ್. ಅಷ್ಟು ಕೇಳಿಕೊಳ್ಳುತ್ತೇವೆ. ಗೋಪಾಲಯ್ಯನೂ ಈಗ ಹೊರಗೆ ಬರುವ ಹಾಗೆ ಇಲ್ಲ" ಎಂದರು.

ರಾಮು ಹಸೆಯ ಜಗುಲಿಯ ಕಡೆಗೆ ನೋಡಿದ. ಹಸೆಯ ಮಣೆಯ ಮೇಲೆ ಗೋಪಾಲಯ್ಯ ಮತ್ತು ಅವನ ಹೆಂಡತಿ!

"ಗೋಪಾಲಯ್ಯನಿಗೆ ಈಗ ಮದುವೆಯೇನು? ಅವನೆಲ್ಲಿ ನಮಗೆ ಹೇಳುತಾನೆ!"

"ಮದುವೆ ಅಲ್ಲ ಸಾರ್. ಮದುವೆ ಆಗಿ ಆಗಲೇ ಒಂದು ವರ್ಷದ ಮೇಲಾಯಿತು. ಈಗ......"

"ಓಹೋ ಸರಿ. ಆದಕ್ಕೇ ಅವನು ರಜಕ್ಕೆ ಬರೆದುಕೊಂಡಿದ್ದು. ಎಲ್ಲಾ ನಡೆಯಲಿ. ಈಗ ನಾವು ಅವನಿಗೆ ತೊಂದರೆ ಕೊಡಕೂಡದು."

"ತೊಂದರೆ ಏನೂ ಇಲ್ಲ ಸಾರ್. ನೀವು ಹಾಗೆ ಹೋಗಿ ಬಿಟ್ಟರೆ ಅವನು ಮನಸ್ಸಿನಲ್ಲಿ ಬಹಳ ನೊಂದುಕೊಂಡು ಬಿಡುತ್ತಾನೆ. ಒಳಕ್ಕೆ ಬಂದು ಹೋಗಬೇಕು."

ರಾಮು ಯೋಚಿಸಿದ. ಹಿಂದೆ ಹೀಗೆಲ್ಲಾ ನಡೆದಿದೆ; ಇನ್ನು ಈ ದಿನ ನಾನು ಹೀಗೆ ಹಿಂತಿರುಗಿ ಬಿಟ್ಟರೆ ಇನ್ನೇನು ತಿಳಿದುಕೊಂಡು ಬಿಡುತ್ತಾನೆಯೋ ಎಂದುಕೊಂಡು ಒಳಕ್ಕೆ ಬಂದ.

ಇಷ್ಟರಲ್ಲಾಗಲೆ ಗೋಪಾಲಯ್ಯನಿಗೆ ಅಮಲ್ದಾರರು ಬಂದಿರುವುದನ್ನಾಗಲೇ ಯಾರೋ ಹೇಳಿದ್ದಿರಬೇಕು. ಅವನಿಗೆ "ಏನು ಹಾಳು, ಕಾಶೀಗೆ ಹೋದರೂ ಶನೇಶ್ವರ ಬಿಡದು ಎನ್ನುವ ಹಾಗೆ ಇಲ್ಲಿಗೂ ಬಂದ" ಎಂದು ತೋರುತಿದ್ದಿತೇನೋ!

ಗೋಪಾಲಯ್ಯ ಅಲ್ಲಿಂದಲೇ ರಾಮೂಗೆ ಕೈಮುಗಿಯಲು ಹೋದ. ರಾಮು "ಆಗಲಿ, ಆಮೇಲೆ" ಎಂದು ಅಲ್ಲಿಂದ ಸಂಜ್ಞೆ ಮಾಡಿದ. ಪುರೋಹಿತರು ಈ ಸಂದರ್ಭವನ್ನು ನೋಡಿಕೊಂಡು ಜಾಗ್ರತೆಯಾಗಿಯೇ ಕಾರ್ಯಗಳನ್ನು ಮುಗಿಸಿದರು.

ಗೋಪಾಲಯ್ಯ—ಹಸೆಯ ಮೇಲಿಂದ ಎದ್ದು ಬಂದವನು ಉಪಚಾರಕ್ಕೋಸ್ಕರ—"ದಯವಿಟ್ಟು ಊಟವನ್ನು ತೀರಿಸಿಕೊಂಡು ಹೋಗಬೇಕು" ಎಂದು ಕೇಳಿಕೊಂಡ. ರಾಮೂಗೆ ಅಲ್ಲಿ ಊಟಕ್ಕೆ ನಿಲ್ಲಲು

ಮನಸ್ಸಿಲ್ಲ. ಆದರೆ "ಗೋಪಾಲಯ್ಯ ಏನು ತಿಳಿದುಕೊಂಡು ಬಿಡುತ್ತಾನೆಯೋ ಪಾಪ" ಎನ್ನುವುದಾಗಿ "ಆಗಲಿ" ಎಂದು ಒಪ್ಪಿಕೊಂಡ.

ಗೋಪಾಲಯ್ಯನಿಗೆ ಇನ್ನೂ ಕಷ್ಟಕ್ಕೇ ಬಂತು. ಸಾಧಾರಣವಾಗಿ ಹಳ್ಳಿಗಳಲ್ಲಿ ಮದುವೆ ಮೊದಲಾದ ದಿನಗಳಲ್ಲಿ ಬೆಳಿಗ್ಗೆ ಮಾಡಿದ್ದ ಪದಾರ್ಥಗಳನ್ನೇ ರಾತ್ರಿಗೂ ಉಪಯೋಗಿಸಿ ಬಿಡುತ್ತಾರೆ. ಬಿಸಿ ಅಡಿಗೆ ಮಾಡುವುದೆಂದರೆ ಅನ್ನ ಸಾರು ಇವೆರಡು ಮಾತ್ರ. ಈಗ ಅನ್ನ, ಸಾರು, ಭಕ್ಷ್ಯಗಳು, ಎಲ್ಲವನ್ನೂ ಒಂದೊಂದಾಗಿ ಮಾಡತೊಡಗಿದರು. ಪ್ರಸ್ತದ ಮೂರು ದಿನಗಳಿಗೂ ಆಗಲೆಂದು ಕೂಡಿಟ್ಟುಕೊಂಡಿದ್ದ ತುಪ್ಪವೆಲ್ಲವನ್ನೂ ಆ ದಿನದ ಅಡಿಗೆಗೇ ಖರ್ಚು ಮಾಡಲಾರಂಭಿಸಿದರು. ಮೂರು ದಿನಗಳಿಗೆ ಮಾಡಬೇಕೆಂದಿದ್ದ ಭಕ್ಷ್ಯಗಳೆಲ್ಲವನ್ನೂ ಒಂದೇ ದಿನಕ್ಕೆ ಆ ರಾತ್ರಿಯೇ ಮಾಡಲು ಹೊರಟರು.

ಪುರೋಹಿತರು "ಗೋಪಾಲಯ್ಯ, ಇನ್ನು ಮುಹೂರ್ತ ಮಿಂಚುತ್ತಾ ಬಂತು. ಇನ್ನು ಏಳಬೇಕು, ಇನ್ನು ಒಳಗಿನ ಕೆಲಸ ಬಹಳ ಇದೆ. ಮುತ್ತೈದೆಯರೆಲ್ಲಿ? ಆರತಿ, ಅಕ್ಷತೆ ಎಲ್ಲಾ ಆಗಬೇಕು ಒಳಗೆ" ಎಂದು ತರದೂದು ಮಾಡತೊಡಗಿದರು. ಅವನ ನಾದನಿಯರು—ಇನ್ನೂ ಸಣ್ಣ ಹುಡುಗಿಯರು—"ಬಾ, ಭಾವ, ಅಕ್ಕ ಕರೀತಿದ್ದಾಳೆ. ಏನು ಮಾಡುತಿದ್ದಿ ಇಲ್ಲಿ" ಎಂದು ಅವನ ಪಂಚೆಯನ್ನು ಹಿಡಿದು ಎಳೆಯುತ್ತಾ ಗಲಾಟೆ ಮಾಡತೊಡಗಿದರು. ಬೆಕ್ಕಿಗೆ ಚೆಲ್ಲಾಟ; ಇಲಿಗೆ ಪ್ರಾಣಸಂಕಟ!

ರಾಮು ಈ ಹೊತ್ತಿನಲ್ಲಿ ಗೋಪಾಲಯ್ಯನ ಸಂಗಡ ಬಹಳ ಸಲಿಗೆಯಾಗಿ ಮಾತನಾಡಬೇಕೆಂದೆಣಿಸಿ "ಹೋಗಯ್ಯ. ಇಲ್ಲೂ ಹೇಳಿಸಿಕೊಳ್ಳಬೇಕೆ? ಪ್ರಾಯದ ಹುಡುಗ ಹೇಗೆ ನಗುತ್ತ ನಲಿಯುತ್ತಾ ಕಾಯುತ್ತಿರಬೇಕು ಎನ್ನುತ್ತಿ" ಎಂದನಂತೆ.

ಆದರೂ ಗೋಪಾಲಯ್ಯ ಹಾಗೆ ನಿಂತಿರುವುದನ್ನು ಕಂಡು "ನಾನೇ ಹೋಗಿ ನಿಮ್ಮವರಿಗೆ ಹೇಳಲೇನು, ಬಂದು ಕೈ ಹಿಡಿದುಕೊಂಡು ಕರೆದುಕೊಂಡು ಹೋಗಿ ಅಂತ" ಎಂದ ರಾಮು. ಅದಕ್ಕೆ ಗೋಪಾಲಯ್ಯ "ತಮ್ಮ ಊಟ ಎಲ್ಲಾ ಮುಗಿಯಲಿ ಸಾರ್, ಆಮೇಲೆ" ಎನ್ನಲು

"ಅಯ್ಯೋ, ನನ್ನ ಊಟ ಕಟ್ಟಿಕೊಂಡು ನಿನಗೇನು, ನೀನು ಹೀಗೆಲ್ಲಾ ಮಾಡೋ ಹಾಗಿದ್ದರೆ ನಾನಿಲ್ಲಿ ನಿಲ್ಲುತ್ತಲೇ ಇರಲಿಲ್ಲ. ಎಲ್ಲಾ ಸರಿಯಾಗಿ ನಡೆಯುತ್ತೆ. ನೀನು ಹೊರಡು" ಎಂದು ಹೇಳಿ ಕಳುಹಿಸಿ ಕೊಟ್ಟ.

ಪ್ರಸ್ತದ ಮನೆಯಲ್ಲಿ ಮುಕ್ಕಾಲು ಪಾಲು ರಾತ್ರಿ ಗಂಡು ಹೆಣ್ಣನ್ನು ಪ್ರಸ್ತದ ಕೋಣೆಗೆ ಬಿಟ್ಟ ಮೇಲೇ ಎಲ್ಲರಿಗೂ ಊಟವಾಗಬೇಕಾದರೆ. ಇಲ್ಲಿ ಅದೂ ಅಲ್ಲದೆ ಹೊಸದಾಗಿ ಭಕ್ಷ್ಯಗಳು ಬೇರೆ ಆಗಬೇಕಾಗಿದೆ. ಗೋಪಾಲಯ್ಯನಿಗೆ ಮನಸ್ಸು ಒಳಗೆ ಇರಗೊಡಿಸದು. ಹೊರಗಡೆಗೆ ರಾಮುವನ್ನು ಸರಿಯಾಗಿ ನೋಡಿಕೊಳ್ಳುತ್ತಿದ್ದಾರೆಯೋ ಇಲ್ಲವೋ ಎಂಬ ಶಂಕೆ. ಕೊನೆಗೆ ಮನಸ್ಸು ನಿಲ್ಲಲಾರದೆ, ಸಹಧರ್ಮಿಣಿಯನ್ನೂ ಅಲ್ಲಿಯೇ ಬಿಟ್ಟು ಸೇವಾ ಧುರಂಧರನಾಗಿ ಹೊರಗೆ ಬಂದು ಬಿಟ್ಟ. ರಾಮು ಆದಷ್ಟು ಮಟ್ಟಿಗೆ ಅಲ್ಲಿ ಎಲ್ಲರೊಡನೆ ಸರಸವಾಗಿರಬೇಕೆಂದು ಪಟೇಲ ಶಾನುಭೋಗರೆಲ್ಲರನ್ನೂ ಸೇರಿಸಿಕೊಂಡು ಹೊರಗಡೆ ಹರಟೆ ಹೊಡೆಯುತ್ತಿದ್ದ. ಗೋಪಾಲಯ್ಯ ಒಳಗೆ ಹೋಗಿ ಅಡಿಗೆ ಜಾಗ್ರತೆ ಆಗಲು ತರದೂದು ಮಾಡ ತೊಡಗಿದ.

ಅಡಿಗೆಯೆಲ್ಲವೂ ಸಿದ್ಧವಾಯಿತು. ಊಟಕ್ಕೆ ಎಲ್ಲರೂ ಎದ್ದಾಗ ರಾಮು ಗೋಪಾಲಯ್ಯ ಇನ್ನೂ ಹೊರಗೆ ಇರುವುದನ್ನು ಕಂಡು ಅವನನ್ನು ಹಾಸ್ಯ ಮಾಡತೊಡಗಿದ. ಅವನೋ "ಇಲ್ಲ ಸಾರ್, ಇಲ್ಲ ಸಾರ್" ಎನ್ನುತ್ತಾ ಕಟ್ಟಕಡಲದೆ ರಾಮು ಊಟಕ್ಕೆ ಕುಳಿತಿದ್ದ ಸ್ಥಳದಲ್ಲಿಯೇ ನಿಂತು ಬಿಟ್ಟಿದ್ದ. ಒಂದೊಂದಾಗಿ ಭಕ್ಷ್ಯಗಳು ಬಂದವು. "ಎನ್ರಿ ಇದು, ನಾನು ಬಂದೆ ಅಂತ ಇವೆಲ್ಲಾನೋ? ಬಹಳ ತೊಂದರೆ ಕೊಟ್ಟೆನ್ರಿ ನಿಮಗೆಲ್ಲಾ ಹಾಗಾದ್ರೆ" ಎಂದ ರಾಮು. ಅದಕ್ಕೂ ಗೋಪಾಲಯ್ಯನ ಉತ್ತರ ಬರೀ "ಇಲ್ಲ ಸಾರ್."

ರಾಮುಗೆ ರಾತ್ರಿಹೊತ್ತು ಹೊತ್ತಾಗಿ ಊಟ ಮಾಡಿ ಅಭ್ಯಾಸವಿಲ್ಲ. ಈ ದಿನ ಅದೂ ಅಲ್ಲದೆ ಇದು ಭಾರಿ ಊಟ. ಅರ್ಧ ಊಟದಲ್ಲಿ ಅವನಿಗೆ ಏನೋ ವಾಂತಿ ಬರುವ ಹಾಗಾಯಿತು. ತಲೆ ತಿರುಗಿಕೊಂಡು ಬಂತು. ಹಾಗೆ, ಅಲ್ಲಿಂದ ಎದ್ದು ಬಿಟ್ಟ.

ಎಲ್ಲರಿಗೂ ಗಾಬರಿಯಾಗತೊಡಗಿತು. ಗೋಪಾಲಯ್ಯನಿಗೋ, ಬೇಕಾಗಿ ಹೀಗೆ ಮಾಡಿ ಬಿಟ್ಟ ಎಂದು ಎಲ್ಲಿ ಪ್ರಾಣಕ್ಕೇ ತಂದು ಬಿಡು

ತ್ತಾರೋ ಎಂಬ ದಿಗಿಲು ಆವರಿಸಿಕೊಂಡುಬಿಟ್ಟಿತು. ರಾಮು ಊಟ ಮುಗಿದ ಮೇಲೆ "ಒಂದಿಬ್ಬರು ಜೊತೆಗೆ ಬಂದು ಬಿಡಿ, ನಡೆದುಕೊಂಡೇ ಹೋಗಿಬಿಡೋಣ" ಎಂದು ಹೇಳಿದ್ದ. ಜೊತೆಗೆ ಹೋಗಲು ಪಂಜು ಎಲ್ಲವೂ ಸಿದ್ಧವಾಗಿತ್ತು. ಈಗ ಹೀಗೆ ಆಗಲು "ಏನು ಸಾರ್, ಗಾಡಿ ಕಟ್ಟಿಬಿಡುತ್ತೇವೆ. ಹೋಗೋಣ. ಇಲ್ಲದೇ ಇದ್ದರೆ ಡಾಕ್ಟರನ್ನು ಅಲ್ಲಿಂದ ಇಲ್ಲಿಗೆ ಕರೆದುಕೊಂಡು ಬಂದು ಬಿಡೋಣವೇ?" ಎಂದು ಕೇಳಿದರು. ಅನ್ಯಾಯವಾಗಿ ಇವರಿಗೆ ಇಷ್ಟು ತೊಂದರೆ ಕೊಡುತ್ತಿರುವೆ ನಲ್ಲಪ್ಪಾ ಎಂದುಕೊಂಡು "ಏನೂ ಬೇಡ್ರಿ, ಇದೇನು ಹೋಗುತ್ತೆ. ಸ್ವಲ್ಪ ಉರುಳಿಕೊಂಡಿದ್ರೆ ಆಯಿತು. ರಾತ್ರಿ ಇಲ್ಲೇ ಮಲಗಿಕೊಂಡು ಬಿಡುತ್ತೇನೆ" ಎಂದ.

ಗೋಪಾಲಯ್ಯನ ಮನೆಯವರಿಗೆ ಇದ್ದಿದ್ದೂ ಕಷ್ಟಕ್ಕೆ ಬಂತು. ಹಳ್ಳಿಗಳಲ್ಲಿ ಗೊತ್ತೇ ಇದೆಯಲ್ಲಾ, ಹಾಸಿಗೆ ಹೊದ್ದಿಗೆ ಹೇಗೆ ಇರುವುದು ಎನ್ನುವುದು. ಈಗ ರಾಮು ಮಲಗಿಕೊಳ್ಳಲು ಸರಿಯಾದ ಜಾಗವನ್ನು ಬೇರೆ ಹುಡುಕಬೇಕು. ಕೊನೆಗೆ ಗೋಪಾಲಯ್ಯನ ಅಣ್ಣ "ಮಲಗುವ ಮನೆಯಲ್ಲಿ ಆ ಮಂಚದ ಮೇಲೆ ಮಲಗಿಕೊಂಡು ಬಿಡಲಿ, ಹೊಸ ಹಾಸಿಗೆಯ ಮೇಲೆ ಬೇರೆ ಒಂದು ಮಗ್ಗಲು ಹಾಸಿಗೆ ಹಾಸಿದರೆ ಆಯಿತು" ಎಂದು ಅಪ್ಪಣೆ ಕೊಟ್ಟುಬಿಟ್ಟ.

ಪಾಪ! ಹೆಣ್ಣು ಗೋಪಾಲಯ್ಯನ ನಿರೀಕ್ಷೆಯಲ್ಲಿ ಒಂದೆಡೆ ಕಾದುಕೊಂಡು ಕುಳಿತಿದ್ದಳು. ಆಕೆಯನ್ನು ಹೊರಗೆ ಕರೆತಂದರು. ಅಲ್ಲಿ ಅಲಂಕರಿಸಿದ್ದ ಅಂದಾಜಿ ಸಾಮಾನುಗಳೆಲ್ಲವನ್ನೂ ಒಳಕ್ಕೆ ಸಾಗಿಸಿದ್ದಾಯಿತು. ಪ್ರಸ್ತದ ಮದುಮಕ್ಕಳು ಮಲಗಬೇಕೆಂದಿದ್ದ ಮಂಚದ ಮೇಲೆ ರಾಮುವನ್ನು ಮಲಗಿಸಬೇಕಾಯಿತು.

ಮೊದಲು ದಿವಸವೇ ಮದುಮಕ್ಕಳು ಬೇರೆ ಮಲಗಕೂಡದು ಎಂದು ಪುರೋಹಿತರು ಆಕ್ಷೇಪಿಸತೊಡಗಿದರು. ಹೆಂಗಸರೂ ಮುದುಕಿಯರೂ ರಾಮುವನ್ನು ಶಪಿಸತೊಡಗಿದರು. ಆದರೇನು! ಹಳ್ಳಿಗಳಲ್ಲಿ ಎಷ್ಟು ದೊಡ್ಡ ಮನೆಗಳಾದರೂ ಇರುವುದೊಂದೇ ಕೊಠಡಿ. ಕೊನೆಗೆ ದೇವರ ಮನೆಯಲ್ಲಿ ಅವರಿಬ್ಬರು ಆ ರಾತ್ರಿಯೆಲ್ಲಾ ಕಾಲಕಳೆಯಬೇಕಾಯಿತು.

ಇನ್ನು ಮುಂದೆ ನಡೆದಿದ್ದನ್ನು ರಾಮುವಿನ ಕಾಗದದಿಂದಲೇ ನೀವು ತಿಳಿದುಕೊಳ್ಳುವಿರಂತೆ; ಉಳಿದ ಭಾಗವನ್ನು ಇಲ್ಲಿ ಎತ್ತಿಕೊಟ್ಟಿರುತ್ತೇನೆ.

"ನೋಡು ಗೋಪಾಲ್, ನಾವು ಅಧಿಕಾರದಲ್ಲಿರುವಾಗ ಹೇಗೆಂದರೆ ಹಾಗೆ ಆಡಿ ಬಿಡುತ್ತೇವೆ. ಹೇಗೆ ಆಡಿದರೂ ನಡೆಯುತ್ತೆ. ನಾವು ಹಾಗೆ ಆಡುವಾಗ ಅದು ಸರಿಯೆಂದೇ ತೋರುತ್ತಿರುತ್ತೆ. ನಮ್ಮನ್ನೇ ನಾವು ವಿಮರ್ಶಿಸುತ್ತಾ ಹೋದಾಗ ತಾನೆ ಅದರ ಬಾಳು ಗೊತ್ತಾಗುವುದು. ಅದನ್ನು ಸರಿಪಡಿಸಿಕೊಳ್ಳಲು ಹೋದರೆ ಒಂದರ ಜೊತೆಗೆ ಇನ್ನೊಂದು ಬೆಳೆದುಕೊಂಡೇ ಹೋಗುತ್ತೆ.

"ಇಲ್ಲಿ ಗೋಪಾಲಯ್ಯನ ವಿಚಾರದಲ್ಲಿ ನಾನು ಎಣಿಸಿ ಮಾಡಲು ಹೊರಟದ್ದೇ ಒಂದು; ಅದು ಪರಿಣಮಿಸಿದ್ದೇ ಒಂದು. ಅವನು ರಜವಿಂದ ಹಿಂತಿರುಗಿ ಬರಲಿ, ಸ್ವಲ್ಪ ಪ್ರಮೋಷನ್ ಕೊಡಿಸಿ ಇನ್ನು ಸರಿಯಾಗಿ ನೋಡಿಕೊಳ್ಳೋಣವೆಂದಿದ್ದರೆ ಅವನು ಈಗ ಕೆಲಸಕ್ಕೆ ರಾಜೀನಾಮೆ ಬರೆದು ಕೊಟ್ಟಿದ್ದಾನೆ. ಆ ದಿನ ರಾತ್ರಿ ಅವನ ಹೆಂಡತಿ ಅವನನ್ನು ಈ ಸೇವಾವೃತ್ತಿಯ ಸಲುವಾಗಿ ಎಷ್ಟು ಹೀಯಾಳಿಸಿದಳೋ ! ಹಿಯಾಳಿಸದೇ ಇರುತ್ತಾಳೆಯೇ ? ಇನ್ನು ಯಾರು ಏನೇನು ಅಂದರೋ ! ಅವನ ಮನಸ್ಸು ಎಷ್ಟು ನೊಂದಿತೋ ?

"ಒಬ್ಬರು ದೊಡ್ಡವರು, ಒಬ್ಬರು ಚಿಕ್ಕವರು ಎಂಬುದು ಏನು ? ನನಗೆ ಇದ್ದ ಸೌಕರ್ಯಗಳೇ ಆ ಗೋಪಾಲಯ್ಯನಿಗೂ ಇದ್ದಿದ್ದರೆ ಅವನು ಏನಾಗಿರುತ್ತಿದ್ದನೋ. ನಾನು ಹೇಳುತ್ತೇನಿ ಕೇಳು, ಈ ಪ್ರಪಂಚದಲ್ಲಿ ಎಲ್ಲವೂ 'ಛಾನ್ಸ್' ಮೇಲೆ ನಿಂತಿದೆ. ಅದನ್ನೇ ಕೆಲವರು ಅದೃಷ್ಟ ಅಂತಾರೆ. ಇನ್ನು ಕೆಲವರು ಹಣೆಯಬರಹ ಅಂತಾರೆ. ಮತ್ತೆ ಕೆಲವರು ಅವರವರ ನಸೀಬು ಎಂದು ಬಿಡುತ್ತಾರೆ. ಯಾರಾರು ಹೇಗಾದರೂ ಅನ್ನಲಿ, ಅವೆಲ್ಲವೂ ಒಂದೇ. ಗೋಪಾಲಯ್ಯ ನಾನು ಹುಟ್ಟಿದಾಗ ಹುಟ್ಟಿ, ನಾನು ಐದಾರು ವರ್ಷಗಳ ಮೇಲೆ ಹುಟ್ಟಿದ್ದರೆ, ಆಗ ನಾನೇ ಅವನಿಗಿಂತಲು ನಿಕೃಷ್ಟನಾಗಿರು ತಿದ್ದೆನೇನೋ ? ಸುಲಭವಾಗಿ ಎಲ್ಲವನ್ನೂ ಅವರವರ ಕರ್ಮ ಎಂದು

ಬಿಡಬಹುದು. ಗೋಪಾಲ್, ನಾನು ಹೇಳುತ್ತೀನಿ ಕೇಳು. ಹಾಗೆ ಎಲ್ಲರೂ ಅನ್ನುತ್ತಾ ಹೋದರೆ ಪ್ರಪಂಚದಲ್ಲಿ ದಯೆ ಎನ್ನುವುದು ಎಲ್ಲಿ ನಿಲ್ಲುತ್ತೆ !

" ಈಗಲೂ, ನಾವು ಇವುಗಳೆಲ್ಲವನ್ನೂ ಮೊದಲೇ ಯೋಚಿಸುವೆವೇ? ಆ ಮೇಲೇನೋ ಪಶ್ಚಾತ್ತಾಪ ಪಡುತ್ತೇವೆ. ಎಷ್ಟು ಪಟ್ಟರೆ ತಾನೆ ಏನು ? ಮಾಡಿದ್ದೇನೋ ಆಗಿ ಹೋಯಿತು...... ........"

ಪರಿಸಮಾಪ್ತಿ.

ನನ್ನ ಕೈಯಿಂದ ಕಾಗದವನ್ನು ತೆಗೆದುಕೊಂಡು ನಮ್ಮವರು·ಅದನ್ನು ಆದ್ಯಂತವಾಗಿ ಓದಿದರು. ನಾನು ಸುಮ್ಮನೆ ಯೋಚಿಸುತ್ತಾ ಹಾಗೆ ಕುಳಿತಿದ್ದೆ. ಅವರು ಅದನ್ನು ಓದಿ ಮುಗಿಸಿದ ಮೇಲೆ ನನ್ನ ಮುಂದೆ ಮೇಜಿನ ಮೇಲೆ ಅದನ್ನು ಇಟ್ಟರು.

ನಾನು ಕಾಗದವನ್ನು ಪುನಃ ನೋಡಿ ಅದನ್ನು ಕೈಗೆ ತೆಗೆದುಕೊಂಡು—

" ನೀನು ಇದನ್ನು ಕೊಟ್ಟಿದ್ದಕ್ಕೆ ನಿನಗೆ ಬಹುಮಾನ ಬಾಕಿ ಇದೆಯಲ್ಲವೇ ? " ಎಂದೆ.

" ಇಲ್ಲ ಅದು ಸಂದಿತು " ಎಂದರು.

" ಹೇಗೆ " ಎಂದೆ.

ಅಲ್ಲಿಯ ವರೆಗೂ ತಲೆಯನ್ನು ತಗ್ಗಿಸಿಕೊಂಡಿದ್ದವರು ತಲೆಯನ್ನು ಮೇಲಕ್ಕೆತ್ತಿ ನನ್ನ ಕಡೆ ದೃಷ್ಟಿಸಿ ನೋಡಿದರು.

ಅವರ ಆ ಬೊಗಸೆಯ ಕಂಗಳ ತುಂಬಾ ಕಣ್ಣೀರು ! ತಕ್ಕ ಬಹುಮಾನ !

ಅವರು ಮೆಲ್ಲಗೆ " ನೀವೂ ಪಶ್ಚಾತ್ತಾಪ ಪಡುವಿರೇನು ? ಯಾರ ಸಲುವಾಗಿ ? " ಎಂದು ಕೇಳಿದರು.

ಉತ್ತರ ಕೊಡಲಾರದೆ ಹೋದೆ.

" ಎಲ್ಲರ ಸಲುವಾಗಿಯೆ ? "

ಅವರು ಆರಿ ಹೋಗಿದ್ದ ಕಾಫಿಯನ್ನು ಕೈಗೆ ತೆಗೆದುಕೊಂಡರು. ನನಗೆ !

# ಪ್ರತೀಕಾರ

---

ರಂಗಿಗೆ ಆಗ ತಾನೆ ನಿದ್ರೆ ಹತ್ತಿತ್ತು. ರಾತ್ರಿಯೆಲ್ಲಾ ಯೋಚಿಸಿ ಯೋಚಿಸಿ ಸಾಕಾಗಿತ್ತು. ಅಂದಿಗೆ ಊಟ ಮಾಡಿ ಎರಡು ದಿನಗಳಾಗಿದ್ದವು. ಆದರೆ ಹಸಿವು ತೃಷೆಯೊಂದೂ ತೋರಿರಲಿಲ್ಲ. ಪ್ರತೀಕಾರ! ಪ್ರತೀಕಾರದಲ್ಲಿಯೇ ಮನಸ್ಸು ನೆಲಸಿತ್ತು. ಯಾವ ವಿಧದಲ್ಲಿ ಸೇಡು ತೀರಿಸಿಕೊಳ್ಳಲಿ, ಯಾವ ರೀತಿ ಆ ದ್ರೋಹಿಗೆ, ವಂಚಕನಿಗೆ ಬುದ್ಧಿಗಲಿಸಲಿ ಎಂದು ಆ ಇರುಳೆಲ್ಲಾ ಯೋಚಿಸುತ್ತಿದ್ದಳು. ಬಗೆ ಹರಿದಿರಲಿಲ್ಲ. ಬೆಳಗಿನ ಜಾವದ ಸುಮಾರಿಗೆ ನಿದ್ರೆ ಹತ್ತಿತ್ತು. ಆಗ ಮಾಘಮಾಸ, ಮಾಘದ ಚಳಿ. ನಿಂತರೆ ತಲೆಗೆ ತಗಲುವಂತಿತ್ತು ಅವಳ ಮನೆಯ ಜೋಪಡಿ. ಅದಕ್ಕೆ ಹೊದಿಸಿರುವುದು ಜಿಂಕ್ ಷೀಟುಗಳು. ಅದರ ಮೇಲೆ ಒಂದೆರಡು ಅಡಿಗಳಷ್ಟು ಹಿಮ ಕುಳಿತಿದೆ. ಅಲ್ಲಲ್ಲಿ ಸಂದಿಗಳಲ್ಲಿ ನೀರು ತೊಟ್ಟಿಕ್ಕುತ್ತಿದೆ. ಮನೆಯ ಕಿಟಕಿ ಬಾಗಿಲುಗಳಾವುವೂ ಭದ್ರವಾಗಿರಲಿಲ್ಲ. ಕಿಟಕಿಗಳಿಗೆ ತಡೆಯಾಗಿ ಗೋಣೀಪಟ್ಟೆಯನ್ನು ಕಟ್ಟಿದ್ದಳು. ಅವುಗಳಲ್ಲಿ ತೂರಿ ಅವಳ ಆ ಮಂದಿರದಲ್ಲಿ ತಾಂಡವವಾಡುತ್ತಿತ್ತು ಅಂದಿನ ಚಳಿ. ತನ್ನ ಎಳೆಗೂಸನ್ನು ಎದೆಗೆ ಅಪ್ಪಿಕೊಂಡು ತನ್ನ ದೇಹದ ಕಾವಿನಿಂದ ಆ ಮಗುವನ್ನು ಬೆಚ್ಚಗಿಟ್ಟುಕೊಂಡು ಮಲಗಿದ್ದಳು.

ಬೆಳಗಿನ ಜಾವದಲ್ಲಿ ಚಳಿ ಮತ್ತಷ್ಟು ಅಧಿಕವಾಯಿತೋ ಏನೋ ಅಥವಾ ಮಗುವಿಗೆ ಹಸಿವು ತೋರಿತೋ, ಸಂಜೆ ತಿರಿದು ತಂದ ಹಾಲು ಹಾಗೆ ಉಳಿದಿತ್ತು. ಅವಳಿಗೆ ಅವಳ ಮನದಲ್ಲೆದ್ದಿದ್ದ ತಳಮಳದಲ್ಲಿ ಮಗುವಿಗೆ ಹಾಲನ್ನು ಕುಡಿಸಬೇಕೆಂಬುದೇ ಮರೆತು ಹೋಗಿದ್ದಿತು. ಅಂತೂ ಆ ಮಗು ಅವಳ ಎದೆಯ ಕೆಳಗೆ ಹೊಟ್ಟೆಯ ಮೇಲೆ ತನ್ನ ಕಾಲುಗಳಿಂದ ಜಾಡಿಸುತ್ತಾ ಅಳಲು ಆರಂಭಿಸಿತು. ಅದರ ಕಾಲುಗಳಿಗೆ ಹಾಕಿದ್ದ ಬೆಳ್ಳಿಯ ಮೆರಗಿನ

ಹಿತ್ತಾಳೆ ಕಡಗಗಳು ತಮ್ಮ ಕಾಠಿನ್ಯವನ್ನೂ ಪ್ರಕಟಿಸಿದವು. ಆಗ ತಾನೆ ಅವಳಿಗೆ ಹತ್ತಿದ್ದ ನಿದ್ರೆ ಹರಿದು ಹೋಯಿತು. ಎಚ್ಚರವಾಗಿ ಹೋಯಿತು.

ಎದ್ದು ದೀಪವನ್ನು ಹಚ್ಚಿಸಲು ಕಡ್ಡಿಯ ಪೆಟ್ಟಿಗೆಯನ್ನು ಹುಡುಕ ತೊಡಗಿದಳು. ಕಡ್ಡಿಯ ಪೆಟ್ಟಿಗೆ ಸಿಕ್ಕಿತು; ಆದರೆ ದೀಪ ಅವಳಿಟ್ಟಿದ್ದ ಕಡೆ ಇರಲಿಲ್ಲ. ಕಡ್ಡಿಯನ್ನು ಗೀಚಿ ನೋಡಿದಳು. ಹಣತೆ ಒಂದು ಕಡೆ ಬಿದ್ದಿದೆ; ಬತ್ತಿ ಇನ್ನೊಂದೆಡೆ ಬಿದ್ದಿದೆ. ಎಣ್ಣೆಯೆಲ್ಲಾ ಚೆಲ್ಲಿಹೋಗಿದೆ. ಬತ್ತಿಯನ್ನು ಅದರಲ್ಲಿಟ್ಟು ದೀಪವನ್ನು ಹಚ್ಚಿಸಿದಳು. ದೀಪಕ್ಕೆ ಎಣ್ಣೆ ಹಾಕುವ ಮೊದಲು ನೆಲುವಿನ ಮೇಲಿಟ್ಟಿದ್ದ ಹಾಲಿನ ಕಡೆ ಮನಸ್ಸು ಹೋಯಿತು. ಅದನ್ನೇನಾದರೂ ಚೆಲ್ಲಿ ಬಿಟ್ಟಿದೆಯೋ ಎಂಬ ಭೀತಿಯುಂಟಾಯಿತು. ದೈವವಶಾತ್ ಅದು ಏನೂ ಆಗಿರಲಿಲ್ಲ. ಇಟ್ಟಲ್ಲಿಯೇ ಇತ್ತು. ಅದು ಬೆಕ್ಕಿನ ಕೈಗೆ ಸಿಕ್ಕುವಂತಿರಲಿಲ್ಲ. ದೀಪಕ್ಕೆ ಎಣ್ಣೆಯನ್ನು ಹಾಕಿ ಒಲೆಯನ್ನು ಹತ್ತಿಸಲು ಹೋದಳು.

ಇತ್ತ ಮಗುವು ಅರ್ಭಟಿಸಲಾರಂಭಿಸಿತು. ಎದ್ದು ಬಂದು ಅದಕ್ಕೆ ಹೊಟ್ಟೆಗೆ ಕೊಟ್ಟು ಮಲಗಿಸಿದಳು. ಹಸಿದಿದ್ದ ಆ ಪಸುಳೆಗೆ ಬತ್ತಿ ಹೋಗಿದ್ದ ಇವಳ ಮೊಲೆಹಾಲು ಎಲ್ಲಿಗೆ ಸಾಕಾಗುವುದು ? ಅತ್ತಾಗ ಒಂದು ತೊಟ್ಟು ಎನ್ನುವಂತೆ ಬಾಯಿ ನೆನೆಸಿ ಅದರ ಕೈಯನ್ನೇ ಅದರ ಬಾಯಿಗಿಟ್ಟು ಬಂತೆಯನ್ನು—ಸೀರೆಯ ಪದರವನ್ನು ಎನ್ನೋಣವೋ—ಹೊದಿಕೆಯನ್ನು ಹೊದ್ದಿಸಿ, ಮಲಗಿಸಿ ಹಾಲು ಕಾಯಿಸಲು ಒಲೆಯನ್ನು ಹೊತ್ತಿಸ ತೊಡಗಿದಳು.

ಸೀಮೆ ಎಣ್ಣೆ ಇಲ್ಲದ ಮನೆಯಲ್ಲಿ ಒಲೆಯನ್ನು ಹತ್ತಿಸುವ ಕಷ್ಟವು ಅದನ್ನು ಅನುಭವಿಸಿದವರಿಗೇ ಗೊತ್ತು. ಹಿಂದೆ ಇವಳು ಎಷ್ಟೋ ಸಲ ಈ ಪಾಡು ಪಟ್ಟಿದ್ದಳು. ಆದರೆ ಆಗ ಮನಸ್ಸಿನಲ್ಲಿ ಒಂದು ಹುಮ್ಮಸ್ಸಿರುತ್ತಿತ್ತು. ಹಾಸಿಗೆಯ ಮೇಲೆ ಆ ಮಗುವಿನ ಬದಲು ಅದರ ತಂದೆ ಮಲಗಿರುತ್ತಿದ್ದನು. ಅವನು ಗಾರೆಯ ಕೆಲಸದವನು. ಬೆಳಗ್ಗೆ ಎದ್ದು ಊಟ ತೀರಿಸಿಕೊಂಡು ಬುತ್ತಿ ಕಟ್ಟಿಕೊಂಡು ಇಬ್ಬರೂ ಕೆಲಸದ ಮೇಲೆ ತೆರಳ ಬೇಕಾಗಿತ್ತು. ಅವಳು ಒಲೆ ಹತ್ತಿಸಿ, ಎಸರಿಟ್ಟು, ಅದರಲ್ಲಿಯೇ ಅವನ

ಮುಖಕ್ಕೆ ಬಿಸಿನೀರನ್ನು ತೆಗೆದಿಟ್ಟು, ಅಡಿಗೆ ಮಾಡಿ ಅವನನ್ನು ಎಬ್ಬಿಸುತ್ತಿದ್ದಳು. ಅವನೆದ್ದು ಬೆಚ್ಚಗೆ ಒಲೆಯ ಮುಂದೆ ಕಾಳಿತಿದ್ದು ಅನಂತರ ಮುಖ ತೊಳೆದು ಊಟ ಮಾಡಿ ಇಬ್ಬರೂ ಒಟ್ಟಿಗೆ ಕೆಲಸಕ್ಕೆ ತೆರಳುತ್ತಿದ್ದರು.

ಒಲೆ ಹೊತ್ತಿಸುತ್ತಿರುವಾಗ ಹಾಸಿಗೆಯ ಕಡೆ ನೋಡಿದಳು. ಅವನೆಲ್ಲಿ? ಊರಿಗೆ ಹೋಗುವೆನೆಂದು ಕೆರಳಿ ಎಲ್ಲೋ ಬಿದ್ದುಕೊಂಡಿದ್ದಾನೆ. ಊರಿಗೆ ಹೋಗಿ ಬರುವೆನೆಂದು ಹೇಳಿ ಎಷ್ಟು ಸಲ ಮೋಸಪಡಿಸಿದ್ದಾನೆ. ಆ ದ್ರೋಹಿಯೆಲ್ಲಿ? ಅವಳ ಮೈಯೆಲ್ಲಾ ಉರಿ ಉರಿಯಾಯಿತು. ಆ ಉರಿಯಲ್ಲಿ ಒಲೆಯನ್ನು ಹಚ್ಚಿಸಿದಳೇ ? ಅದು ಹೊತ್ತಿಕೊಳ್ಳುತ್ತಿರುವಾಗ ತನ್ನ ಹಿಂದಿನ ದಿನಗಳೆಲ್ಲವೂ ನೆನಪಿಗೆ ಬಂದವು. ಆ ದಿನಗಳು ಎಷ್ಟು ಒಲವಿನ ದಿನಗಳು. ಅವನೊಂದಿಗೆ ಹೇಗೆ ಕೂಡಿ ಆಡುತ್ತಿದ್ದಳು. ಹಳ್ಳಿಯಲ್ಲಿದ್ದಾಗ ಇಬ್ಬರೂ ದನಗಳನ್ನು ಹೊಡೆದುಕೊಂಡು ಮರಳೋಣಿಗೆ ಹೋಗಿ, ಅಲ್ಲಿ ಗೇರುಹಣ್ಣಿಗೆ ಮರದಲ್ಲಿ ಲೂಟಿ ಮಾಡಿಕೊಂಡು ಬಂದ ಹಣ್ಣುಗಳನ್ನು ಮರಳಿನಲ್ಲಿ ಮನೆ ಕಟ್ಟಿ, ಸಂಸಾರ ಹೂಡಿ, ವಿನಿಯೋಗಿಸುತಿದ್ದ ಆ ದಿನಗಳು ನೆನಪಿಗೆ ಬಂದವು. ಅಲ್ಲಿ ಅಂಕುರಿಸಿದ್ದ ಆ ಪ್ರೇಮವೇ ಅವನ ಕೈ ಹಿಡಿಸಿ, ಮನೆ ಬಿಡಿಸಿ ಇಲ್ಲಿಗೆ ಎಳೆತಂದುದು. ಅಲ್ಲಿ ಮರಳಿನಲ್ಲಿ ಮನೆ ಕಟ್ಟಿದರು. ಇಲ್ಲಿ ನೈಜ ಗೃಹವನ್ನೇ ಕಟ್ಟಲು ಬಂದರು.

ಬಂದ ಆರಂಭದಲ್ಲಿ 'ಅವನಿಗೆ ಅವಳು, ಅವಳಿಗೆ ಅವನು,' ಹಾಗಿದ್ದಿತು. ಹಗಲಿರುಳೂ ಈರ್ವರೂ ಒಟ್ಟಿಗಿರುತ್ತಿದ್ದರು. ಮನೆಯಲ್ಲಿಯೂ ಕೆಲಸಕ್ಕೆ ಹೋದಾಗಲೂ ಒಬ್ಬರನ್ನೊಬ್ಬರು ಎಡಬಿಡುತ್ತಿರಲಿಲ್ಲ. ಆದರೆ ಅದು ಬಹಳ ದಿವಸ ಹಾಗೆ ಸಾಗಲಿಲ್ಲ. ಅವಳು ಗರ್ಭಿಣಿಯಾದಳು. ಅವನ ಮನವು ಬೇರೆಡೆಗೆ ಜಾರಿತು. ಅವನೊಂದಿಗೆ ಅವಳು ಕೆಲಸಕ್ಕೆ ಹೋಗಲು ಆಗುತ್ತಿರಲಿಲ್ಲ. ಆಗ ಅಲ್ಲಿ ಅವನಿಗೆ ನೆರವಾಗಲು ಇನ್ನೊಬ್ಬ ತರುಣಿಯು ಹುಟ್ಟಿಕೊಂಡಳು. ಅವಳ ನೆರವು ಅವನಿಗೆ ಬಹಳ ಬೇಕಾಯಿತು. ತುಂಬ ಪ್ರಾಯದವನು. ಇನ್ನು ಕೇಳಬೇಕೆ ? ಮನೆಗೆ ಏಕೆ ಇಷ್ಟು ಹೊತ್ತು ಮಾಡಿಕೊಂಡು ಬರುವೆಯೆಂದು ರಂಗಿ ಕೇಳಿದರೆ ಅವನು "ಈಚೆಗೆ ಕೆಲಸ ಬಹಳ ಹೊತ್ತು ಹಿಡಿದು ಬಿಡುತ್ತದೆ. ಮೇಸ್ತ್ರಿ ನಮ್ಮನ್ನು ಬೇಗ ಕಳುಹಿಸಿಕೊಡುವುದಿಲ್ಲ, ನಿಲ್ಲಿಸಿಕೊಂಡು ಬಿಡುತ್ತಾನೆ" ಒಂದಲ್ಲಾ ಒಂದು ಸಬೂಬು ಹೇಳಿ

ಬಿಡುವನು. ಆದರೆ ನಿಜವಾಗಿಯೂ ಮೇಸ್ತ್ರಿಯಲ್ಲ ಅವನನ್ನು ಹಾಗೆ ನಿಲ್ಲಿಸಿ ಕೊಳ್ಳುತ್ತಿದ್ದವನು; ಅಲ್ಲಿಗೆ ಕೆಲಸಕ್ಕೆ ಹೋಗುತ್ತಿದ್ದ ಇನ್ನೊಬ್ಬ ತರುಣಿ ಎಂಬುದನ್ನು ಅರಿಯಳು.

ಕೆಲ ದಿನಗಳು ಹಾಗೆ ಕಳೆದ ಮೇಲೆ "ನಾನು ಊರಿಗೆ ಹೋಗಿ ಬರುತ್ತೇನೆ. ಅಲ್ಲಿ ಅಪ್ಪನಿಗೆ ಕಾಯಿಲೆಯಂತೆ" ಎಂದು ಹೇಳಿ ಎರಡು ಮೂರು ದಿನಗಳು ಒಟ್ಟೊಟ್ಟಿಗೇ ಮನೆಗೆ ಬರುವುದನ್ನು ನಿಲ್ಲಿಸುತ್ತಿದ್ದನು. ಈಕೆ ಹೌದೇನೋ ಎಂದು, ಅವನು ಹಿಂತಿರುಗಿದೊಡನೇ "ಈಗ ಹೇಗಿದೆ, ಗುಣವಾಗಿದ್ದಾರಾ? ನನ್ನನ್ನು ಕೇಳಿದರಾ? ಬರುವ ಸಲ ನನ್ನನ್ನೂ ಕರೆದುಕೊಂಡು ಹೋಗಿ" ಎಂದು ಹೇಳುವಳು. "ಆಗಲಿ" ಎಂದು, ಇನ್ನೊಂದು ಸಲ "ನೋಡು ಅಲ್ಲಿಗೆ ಹೋಗಿ ಬರಬೇಕು. ಖರ್ಚಿಗೆ ದುಡ್ಡಿಲ್ಲ. ಅವರೂ ತೆಗೆದುಕೊಂಡು ಬರಲು ಬರೆದಿದ್ದಾರೆ. ನಾನೊಬ್ಬನೇ ಈ ಸಲ ಹೋಗಿ ಬರುತ್ತೇನೆ. ಎಲ್ಲಿ ಆ ವಂಕಿ ಕೊಡು, ಮಾರವಾಡಿಯಲ್ಲಿ ಅಡವಿಟ್ಟು ದುಡ್ಡು ತರೋಣ" ಎಂದು ಹೇಳಿ ಹೀಗೆ ಅವಳ ಒಡವೆಗಳನ್ನೂ ಒಂದೊಂದಾಗಿ ಸುಲಿಯಲಾರಂಭಿಸಿದ. ಕೆಲವು ಒಡವೆಗಳು ಮಾರವಾಡಿಯ ಪಾಲಾದವು. ಮತ್ತೆ ಕೆಲವು ಅವನ ಆ ತರುಣಿಯ ಆಭರಣಗಳಾದವು. ಈ ಮಂಕು ಮಾವನವರಿಗೆ ಸಲ್ಲಿತಲ್ಲಾ ಎಂದು ತೃಪ್ತಿ ತಂದುಕೊಳ್ಳುತ್ತಿದ್ದಳು.

ಈ ಸಲವೂ ಅವಳಿಗೆ ಇದ್ದ ಒಳ್ಳೆಯ ಸೀರೆಯನ್ನು ಅಡವಿಟ್ಟು ದುಡ್ಡು ತೆಗೆದುಕೊಂಡು ತಂದೆಗೆ ಕಾಯಿಲೆ ನೋಡಿಕೊಂಡು ಬರುವೆನೆಂದು ಹೇಳಿ ಹೊರಟು ಹೋಗಿ ಮೂರು ದಿವಸಗಳಾಗಿದ್ದವು. ಹಿಂದಿನ ದಿನ ಸಂಜೆ ಮನೆಯಲ್ಲಿ ಹಸಿಟ್ಟು ಇಲ್ಲದೇ ಇರಲು ಮಡಕೆ ಕುಡಿಕೆಗಳಲ್ಲಿ ಆಗಾಗ ಹಾಕಿಟ್ಟಿದ್ದ ದುಡ್ಡು ಕಾಸುಗಳನ್ನೆಲ್ಲಾ ಕೂಡಿಸಿ ಅದಕ್ಕೆ ರಾಗಿ ತೆಗೆದುಕೊಂಡು ತನ್ನ ಕೈಯಲ್ಲಿ ಬೀಸಿಕೊಳ್ಳಲು ಶಕ್ತಿಯಿಲ್ಲದುದರಿಂದ ಮಿಷನ್ನಿನಲ್ಲಿ ಬೀಸಿಸಿಕೊಂಡು ಬರುತ್ತಿದ್ದಳು. ಅವಳಿಗೆ ದಾರಿಯಲ್ಲಿ ಇನ್ನೊಬ್ಬ ತರುಣಿಯೊಡನೆ ಅವನು ಬರುತ್ತಿರುವಂತೆ ಭಾಸವಾಯಿತು. ಅವಳು ಅವರೇ ಏನೋ ನೋಡೋಣವೆಂದು ನಿಂತುಕೊಂಡಳು. ಹೌದು ಅವರೇ! ಆ ತರುಣಿ ಯಾರು? ಯೋಚಿಸಿದಳು. ನೆನಪಿಗೆ ಬಂತು.

ಅವಳೂ ಕೆಲಸಕ್ಕೆ ಬರುತ್ತಿದ್ದಳು. ಹೆಸರಾದವಳು. ತನ್ನ ಗಂಡ ನಿಗೆ ಮದ್ದು ಹಾಕಿದವಳೆಂದು ಪ್ರತೀತಿ ಇತ್ತು. ಅವನಿಗೆ ಅವಳ ಸಹ ವಾಸವೇ ? ಯಾವಾಗ ಊರಿಗೆ ಬಂದ ? ತನ್ನ ಕಣ್ಣುಗಳನ್ನೇ ತಾನು ನಂಬಲಾರದೆ ಹೋದಳು. ಅವರು ಬಳಿಗೆ ಬಂದು ಮುಂದಕ್ಕೆ ಸರಿದು ಹೋದರು. ಏನು ಈರ್ವರೂ ಕುಡಿದಿದ್ದಾರೆಯೇ ? ಯಾವಾಗ ಅವನು ಕುಡಿಯುವುದನ್ನು ಕಲಿತ ? ರಂಗಿ ಅವಳ ಹೆಸರನ್ನು ಹಿಡಿದು ಕರೆದಳು. ಅವಳು ಹಿಂತಿರುಗಿ ಅವನಿಗೆ ಏನನ್ನು ಉಸುರಿದಳೋ ಈರ್ವರೂ ರಂಗಿಯು ಕಡೆ ನೋಡಿ ನಕ್ಕರು. ರಂಗಿಗೆ ಪುನಃ ಅನುಮಾನವುಂಟಾಯಿತು. ಆದರೆ...ಇಲ್ಲ ಅವನೇ ಇರಬೇಕು ಎಂದು ಅವನನ್ನೇ ಸಂಬೋಧಿಸಿದಳು. ನಾಲ್ಕಾರು ಕಠಿನ ಮಾತುಗಳನ್ನೂ ನುಡಿದಳು. ಅವನಿಗೆ ಹಿಡಿಸಲಾರದಷ್ಟು ಕೋಪವು ಉಕ್ಕಿ ಬಂದಿತು. 'ಮನೆಯನ್ನು ಬಿಟ್ಟು ಇಲ್ಲಿ ನನಗೆ ಅವ ಮಾನ ಮಾಡಲು ಬಂದೆಯಾ ?' ಎಂದು ಅವಳ ಕೆನ್ನೆಗೆ ಒಂದು ಬಿಟ್ಟ. ತಲೆಯ ಮೇಲೆ ಗೊಡೆ ಉರುಳಿ ಹೋಯಿತು. ಹಿಟ್ಟನಲ್ಲಿ ಅವಳಿಗೆ ಅಭಿ ಷೇಕವಾಯಿತು. ಅದನ್ನು ಕಂಡು ಅವನೊಡನೆ ಇದ್ದ ಆ ತರುಣಿ ಗಹ ಗಹಿಸಿ ನಗತೊಡಗಿದಳು. ಕಾರ್ಯವು ಮಿಂಚಿದ ಮೇಲೆ ಇವನಿಗೆ ಮರುಕ! ಮೌನವಾಗಿ ನಿಂತಿದ್ದವನು ಹಸಿಟ್ಟನ್ನು ಗೊಡೆಗೆ ತುಂಬಲು ಹೋದ. ಅವಳು ಬಿಡುವಳೇ ! ಕೈಹಿಡಿದು ಅವನನ್ನು ಎಳೆದುಕೊಂಡು ಹೋದಳು. ರಂಗಿಯು ಅಲೆ ಕುಳಿತು ಅತ್ತಳು. ಜನಗಳು ನೆರೆಯುತೊಡಗಲು ಮನೆಗೆ ಹೊರಟು ಬಂದಳು. ಮನೆಯಲ್ಲಿ ಮಗುವನ್ನು ಕಂಡಾಗ ಮತ್ತಷ್ಟು ದುಃಖವುಂಟಾಯಿತು. ಊರಿಗೆ ಹೋಗಿ ಬಿಡೋಣವೇ ಎಂದು ಯೋಚಿ ಸಿದಳು. ಊರಿನಿಂದ ಬಂದ ಆ ಹುಮ್ಮಸ್ಸೇನು ? ಈಗ ಯಾವ ಮುಖ ವನ್ನಿಟ್ಟುಕೊಂಡು ಹಿಂತಿರುಗುವುದು? ತನ್ನ ಸರೀಕರಲ್ಲಿ ಹೇಗೆ ಬೆರೆಯ್ಯು ವುದು. ಒಂದು ವೇಳೆ ಹೋದರೂ ಅವನೆಲ್ಲಿಗೆ ದಾರಿಗೆ ಬರುವನು. ಅವ ನಿಗೆ ಬುದ್ಧಿ ಕಲಿಸಬೇಕು. ಹೇಗೆ ಕಲಿಸುವುದು? ಅವರು ಕೆಲಸ ಮಾಡು ತ್ತಿದ್ದ ಮೇಸ್ತ್ರಿಗೆ ಬಿನ್ನವಿಸಿಕೊಳ್ಳೋಣವೆಂದು — ಮಗುವಿಗೆ ಹಾಲಿತ್ತು. ಪಕ್ಕದ ಮನೆಯವಳಿಗೇ ಇನ್ನು ಸ್ವಲ್ಪ ಹೊತ್ತು ಮಗುವನ್ನು ನೋಡಿ ಕೊಂಡಿರುವಂತೆ ತಿಳಿಸಿ ಮೇಸ್ತ್ರಿಯ ಮನೆಗೆ ತೆರಳಿದಳು.

ಅವರ ಮನೆಗೆ ಹೊರಡಲು ದಾರಿಯಲ್ಲಿಯೇ ಮೇಸ್ತ್ರಿಯ ಮಗ ಸಿಕ್ಕಿದ. ಮೇಸ್ತ್ರಿಯು ಕಾಲವಾಗಿ ಆಗಲೇ ಮೂರು ತಿಂಗಳುಗಳಾಗಿದ್ದವು. ಅವಳಿಗೆ ಆ ಸುದ್ದಿ ಮುಟ್ಟಿಯೇ ಇರಲಿಲ್ಲ. ಈಗ ಮೇಸ್ತ್ರಿಯ ಮಗನೇ ನೋಡಿಕೊಳ್ಳುತ್ತಿದ್ದ. ಅವನು ಅವಳ ವಿಷಯವನ್ನೆಲ್ಲಾ ವಿಚಾರಿಸಿ ಬಹಳ ಕನಿಕರ ಪಟ್ಟ. ತಾನು ಅವರ ನಡತೆಯನ್ನು ಕಂಡು ಎರಡು ತಿಂಗಳುಗಳ ಹಿಂದೆಯೇ ಓಡಿಸಿ ಬಿಟ್ಟಿರುವುದಾಗಿ ತಿಳಿಸಿದ. ಅಲ್ಲದೆ ಅವರು ನಾಚಿಕೆ ಯಿಲ್ಲದೆ ತಮ್ಮ ಮನೆಯ ಬಳಿಯೇ ಮಾವಿನ ತೋಪಿನ ಬಳಿ ಷೆಡ್ಡುಗಳನ್ನು ಹಾಕಿಕೊಂಡಿರುವುದಾಗಿ ಹೇಳಿದ. ಸಾಧ್ಯವಾದರೆ ಮುಂದೆ ಅವನಲ್ಲಿಯೇ ಅವಳು ಬಂದು ಕೆಲಸಕ್ಕೆ ಸೇರಬಹುದೆಂದೂ ಸಹಾಯ ಮಾಡುವೆನೆಂದೂ ಹೇಳಿ 'ಈಗ ಖರ್ಚಿಗೆ ತೆಗೆದಿಕೋ' ಎಂದು ಅವಳು ಒಲ್ಲೆನೆಂದರೂ ಒಂದು ರೂಪಾಯಿಯನ್ನು ಕೊಟ್ಟು ತೆರಳಿದ.

ಅವಳು ಹಿಂತಿರುಗಿದಾಗ ಅವಳ ಮನದಲ್ಲಿ ಮತ್ತಷ್ಟು ದುಗುಡವು ತುಂಬಿತ್ತು. ಅವನ ಆ ಬಾಳು ಲೋಕಕ್ಕೇ ಪ್ರಸಿದ್ಧವಾಗಿದೆಯಲ್ಲಾ! ನಾನು ಮಟ್ಟಿಗೇ ಕುರುಡಳಾಗಿದ್ದೆನಲ್ಲಾ! ಈಗ ಅವನನ್ನು ಸರಿಯಾದ ಮಾರ್ಗಕ್ಕೆ ತರುವುದು ಹೇಗೆ? ಎಂದು ಯೋಚಿಸತೊಡಗಲು ಅವನ ಪ್ರತಿ ಯೊಂದು ನಡವಳಿಕೆಯೂ ಅವಳ ನೆನಪಿಗೆ ಬಂದು ಅವುಗಳ ನಿಜಚರಿತೆ ಯನ್ನು ಬಿತ್ತರಿಸತೊಡಗಿದವು. ಅವನ ಕಾರ್ಯಗಳೊಂದೊಂದೂ ಅವನು ದ್ರೋಹಿಯೆನ್ನುವುದನ್ನು ಪುಷ್ಟೀಕರಿಸತೊಡಗಿದವು. ಆ ದ್ರೋಹಿಯಲ್ಲಿ ವಂಚಕನ ಎನಿತು ಸೇಡನ್ನು ತೀರಿಸಿಕೊಳ್ಳುವುದು ಎಂದು ಅಂದಿನ ಇರುಳೆಲ್ಲಾ ಯೋಚಿಸುತ್ತಾ ಕಳೆದಳು. ಬಗೆಹರಿದಿರಲಿಲ್ಲ.

ಹಾಲು ಬಿಸಿಯಾದೊಡನೆಯೇ ಅದನ್ನು ಮಗುವಿಗೆ ಕುಡಿಸಿ ತಾನೂ ಅದರೊಂದಿಗೆ ಮಲಗಿಕೊಂಡಳು. ಮಗುವಿಗೆ ಒಡನೆಯೇ ನಿದ್ರೆ ಬಂದಿತು. ಏನೂ ಅರಿಯದ ಪಸುಳೆ. ಅವಳಿಗೆ ನಿದ್ರೆಯೇ! ಅಂದು ಭಾನುವಾರ. ಹಿಂದಿನ ಭಾನುವಾರಗಳಲ್ಲಿ ಗಂಡಹೆಂಡರಿಬ್ಬರೂ ಇಷ್ಟು ಹೊತ್ತಿಗೆ ಎದ್ದು ನೀರನ್ನು ಕಾಯಿಸಿ ಎರೆದುಕೊಳ್ಳುತ್ತಿದ್ದರು. ಇಂದಿವಳು ಕಂಬನಿಗರೆ ಯುತ್ತಾ ಹಾಸಿಗೆಯಲ್ಲಿ ಬಿದ್ದಿದ್ದಾಳೆ. ತಾವೆರೆದುಕೊಳ್ಳುತ್ತಿದ್ದದ್ದು, ತನ್ನ

ನಿಡಿದಾದ ಕೂದಲನ್ನು ಎಳೆಬಿಸಿಲಿನಲ್ಲಿ ಒಣಗಿಸಲು ಮನೆಯ ಮುಂದೆ ಕುಳಿತಾಗ ಅವನು ಹಾಸ್ಯ ಮಾಡುತ್ತಿದ್ದದ್ದು, ಆಮೇಲೆ ಇರ್ವರೂ ಪೇಟೆಗೆ ಮುಂದಿನ ವಾರಕ್ಕಾಗುವ ಸಾಮಾನುಗಳನ್ನು ತರಲು ಹೋಗುತ್ತಿದ್ದದ್ದು, ದಾರಿಯಲ್ಲಿ ಮಾರ್ಕೆಟ್ಟಿನಲ್ಲಿನ ತರುಣರೆಲ್ಲರೂ ಇವಳನ್ನೇ ದಿಟ್ಟಿಸಿ ನೋಡು ತ್ತಿದ್ದದ್ದು, ಒಂದು ಸಲ ಒಬ್ಬ ಇವಳ ಮೇಲೆ ಕಣ್ಣು ಹೊಡೆದುದನ್ನು ಕಂಡು ಅವನು ಆತನನ್ನು ಅಪ್ಪಳಿಸಿದ್ದು, ಎಲ್ಲಾ ನೆನಪಿಗೆ ಬಂದವು. ಆಗ ಮತ್ತೊಂದು ಯೋಚನೆ ಹೊಳೆಯಿತು. ಹೌದು ಹಾಗೆ ಆದದ್ದೇ ಆದರೆ ಅವನು ಕಣ್ಣು ಬಿಡುವನು. ದಾರಿಗೆ ಬರುವನು. ಆದರೆ ಅಂಥ ಕೆಲಸಕ್ಕೆ ಕೈ ಹಾಕುವುದೇ ? ಅದು ಬೇರೆ ವಿಧದಲ್ಲಿ ಪರಿಣಮಿಸಿದರೆ ?.... ಸೇಡು ತೀರಿಸಿಕೊಂಡಂತಾಗುತ್ತದೆ. ಏನು ಸೇಡು ತೀರಿಸಿಕೊಳ್ಳಲು ಹೋಗಿ ಮೂಗನ್ನು ಕೊಯ್ದು ಕೊಳ್ಳುವುದೇ ? ಇಲ್ಲ. ಇರುವುದದೊಂದೇ ದಾರಿ. ಇನ್ನು ಆತ. ಆತನೇನೆಂದು ಭಾವಿಸುವನೋ ? ಏನು ಭಾವಿಸು ವನು ! ಅವನಲ್ಲಿ ಗಂಡನ ವಿಷಯವನ್ನು ಅರಿಕೆಮಾಡಿಕೊಳ್ಳಲು ಹೋದಾಗ ಎಷ್ಟು ಆದರದಿಂದ ಮಾತನಾಡಿಸಿದ. ದಾರಿಯಲ್ಲಿದ್ದ ದೀಪದ ಬೆಳಕಿನಲ್ಲಿ ತನ್ನನ್ನು ತನ್ನ ರೂಪರಾಶಿಯನ್ನು ಕಂಡು ಮರುಳಾಗಲ್ಲವೇ ಅವನು ರೂಪಾಯನ್ನು ಕೊಟ್ಟು ಕಳುಹಿಸಿದನು. ಏಕೆ, ಬಾಯಿ ಬಿಟ್ಟೇ ಹೇಳಿದ ನಲ್ಲಾ. ಇಂತಹ ನಿನ್ನನ್ನು ಬಿಟ್ಟು ಹೇಗೆ ಅವನು ಅವಳಲ್ಲಿಗೆ ಹೋದ. ಅವಳಿಗೂ ನಿನಗೂ ಎಲ್ಲಿಗೆಲ್ಲಿಗೆ ಎಂದನಲ್ಲಾ. ಅವರ ಮನೆಯ ಒಳಿಯಲ್ಲಿ ಅವಳೊಂದಿಗೆ ಅವನು ಬಿದ್ದುಕೊಂಡಿರುತ್ತಾನೆ. ನೋಡಲಿ ನಾನು ಅವರ ಮನೆಗೆ ಹೋಗಿ ಬರುವುದನ್ನು. ಅವನು ಮುಖಕ್ಕೆ ಕನ್ನಡಿ ಹಿಡಿದಂತಾ ಗುತ್ತೆ. ಇಲ್ಲ ಹೀಗೆ ಮಾಡುವುದೇ ಸರಿ ಎಂದು ದೊಡ್ಡ ಒಲೆಯನ್ನು ಹೊತ್ತಿಸಿ ಹರಿವಾಣದಲ್ಲಿ ನೀರನ್ನಿಟ್ಟು ಕಾಯಿಸತೊಡಗಿದಳು.

ನೀರು ಕಾಯುವ ಹೊತ್ತಿಗೆ ಬೆಳಗಾಯಿತು. ಮೇಸ್ತ್ರಿಯ ಮಗ ಕೊಟ್ಟಿದ್ದ ಒಂದು ರೂಪಾಯಿಯಲ್ಲಿ ಎಣ್ಣೆ, ಸೀಗೇಕಾಯಿ, ಅರಿಶಿನ ಇನ್ನೂ ಇತರ ಮನೆಯ ಸಾಮಗ್ರಿಗಳನ್ನೂ ಕೊಂಡು ತಂದು ನೀರನ್ನು ಹಾಕಿ ಕೊಂಡಳು. ತಿಂಗಳುಗಟ್ಟಲೆ ತಲೆಗೆ ನೀರು ಕಾಣದೆ ಕೂದಲೆಲ್ಲಾ ಹುಂಕಣೆ ಹಿಡಿದು ಹೋಗಿದ್ದಿತು. ಕೊಬ್ಬರಿಯೆಣ್ಣೆಯನ್ನು ಸವರಿ ಚೆನ್ನಾಗಿ

ಬಾಚಿಕೊಂಡು ಸಿಂಗರಿಸಿಕೊಂಡಳು. ತನಗಿದ್ದ ಒಂದೇ ಒಂದಾದ ಒಳ್ಳೆಯ ಸೀರೆಯನ್ನು ಮಾರವಾಡಿಯಲ್ಲಿ ಅಡವಿಟ್ಟದ್ದಾಗಿತ್ತಲ್ಲಾ. ತನ್ನ ತಾಯಿ ಸಾಯುವಾಗ ತನಗೆ ಕೊಟ್ಟಿದ್ದ ಚಿನ್ನದ ಗುಂಡುಗಳನ್ನು ತನ್ನ ತಾಳಿಯೊಂದಿಗೆ ಪೋಣಿಸಿಕೊಂಡಿದ್ದಳು. ಕರಿಮಣಿಯನ್ನು ಹರಿದು ಆ ಗುಂಡುಗಳನ್ನು ಹೊರಗೆ ತೆಗೆದುಕೊಂಡಳು. ಆಗ ಮೈ ಅದುರಿತು. ಆದರೆ ಮನಸ್ಸು ಹಿಮ್ಮೆಟ್ಟಲಿಲ್ಲ. ಅವುಗಳನ್ನು ತೆಗೆದುಕೊಂಡು ಹೋಗಿ ಮಾರವಾಡಿಯಲ್ಲಿ ಒತ್ತೆ ಇಟ್ಟು ಸೀರೆಯನ್ನು ಬಿಡಿಸಿಕೊಂಡು ತಂದಳು.

ಬೇಗ ಅಡಿಗೆ ಮಾಡಿ, ಮಗುವಿಗೂ ಹಾಲು ತಂದು ಕುಡಿಸಿ ಸಂಜೆಯಾಗಲು ಕಾದಿದ್ದಳು. ನಾಲ್ಕು ಘಂಟೆಯಾದೊಡನೆಯೇ ಮಗುವನ್ನು ಪಕ್ಕದ ಮನೆಯವಳಲ್ಲಿ ಬಿಟ್ಟು, ಮೇಸ್ತ್ರಿಯ ಮನೆಗೆ ಹೋಗಿ ಬರುವೆನೆಂದು ಹೇಳಿ, ' ಬೇಗ ಬಂದು ಬಿಡುವೆ, ಮಗುವಿಗೆ ಇನ್ನೊಂದು ಸಲ ಬೇಕಾದರೆ ಹಾಲನ್ನು ಕುಡಿಸುವ'ಂತೆ ತಿಳಿಸಿ, ಅವಳ ಕೈಯಲ್ಲಿ ಒಂದಾಣೆಯನ್ನಿಟ್ಟು, ಮನೆಗೆ ಬಂದು ಸಿಂಗರಿಸಿಕೊಂಡು ಹೊರಟಳು. ಮುರುಕು ಕನ್ನಡಿಯಲ್ಲಿ ತನ್ನ ರೂಪರಾಶಿಯನ್ನು ಕಂಡು ತಾನೇ ಮರುಳು ಹೋದಳು. ದಾರಿಯಲ್ಲಿ ಒಂದು ಕುಚ್ಚು ಹೂವನ್ನು ಕೊಂಡುಕೊಂಡು ಮುಡಿದುಕೊಂಡಳು. ಅಂದು ಭಾನುವಾರವಾಗಿದ್ದುದರಿಂದ ಅಂಗಡಿ ಬೀದಿಯಲ್ಲಿ ಅನೇಕ ತರು ಣರು ನೆರೆದಿದ್ದರು. ಅವರ ದೃಷ್ಟಿಯೆಲ್ಲವೂ ಇವಳ ಮೇಲೇ ಇತ್ತು. ತಾನಿಷ್ಟು ಸಿಂಗರಿಸಿಕೊಂಡಿದ್ದೂ ಸಾರ್ಥಕವಾಯಿತೆಂದು ತಿಳಿದು ಮೇಸ್ತ್ರಿಯ ಮನೆಯ ಕಡೆಗೆ ಕಾಲು ಹಾಕಿದಳು.

ಮೇಸ್ತ್ರಿಯ ಮನೆ ಪಕ್ಕದಲ್ಲಿದ್ದ ಮಾವಿನ ತೋಪಿನಲ್ಲಿರುವ ಗುಡಿಸಲು ಗಳ ಬಳಿಯಲ್ಲಿಯೇ ಅವಳ ಗಂಡ, ಆ ಮಹಾತಾಯಿ ಇದ್ದರು. ಅವಳು ಅವರ ದೃಷ್ಟಿಗೆ ಬೀಳಲೆಂದು ತಡೆಮಾಡಿ ಒಳಹೊಕ್ಕಳು.

ಮೇಸ್ತ್ರಿಯ ಮನೆಯನ್ನು ಹೊಕ್ಕಾಗ ಮೇಸ್ತ್ರಿಯ ಮಗ ಒಳಗೇ ಇದ್ದ. ಅವಳು ಬಾಗಿಲಿಗೆ ಹೋದೊಡನೆಯೇ " ಯಾರು ? " ಎಂದನು. ಆ ನುಡಿ ಕೇಳಿ ಅವಳಿಗೆ ರೋಮಾಂಚನವಾಯಿತು. ಧೈರ್ಯ ತೆಗೆದು ಕೊಂಡು " ನಾನು " ಎಂದಳು. ಅವನು ಅವಳಿಗೆ ಒಳಕ್ಕೆ ಬರುವಂತೆ ಹೇಳಿದ. ಅವಳು ಒಳಕ್ಕೆ ಬಂದು ಕಂಬದ ಅರುಗಿನಲ್ಲಿ ನಿಂತಳು. ಅವನು

ಪಡಸಾಲೆಯ ನಡುವೆಯಿದ್ದ ಉಯ್ಯಾಲೆಯ ಮೇಲೆ ಕುಳಿತಿದ್ದ. ಪಕ್ಕದಲ್ಲಿ ಅವನ ಹೆಂಡತಿ ನಿಂತಿದ್ದಳು. ಅವಳು ಒಳಕ್ಕೆ ಬಂದು ಆ ರೀತಿ ನಿಂತಿರುವುದನ್ನು ಕಂಡು ಮೇಸ್ತ್ರಿ ಮಗನ ಹೆಂಡತಿ ಯಾರಿವಳೆಂದು ಗಂಡನನ್ನು ಪ್ರಶ್ನಿಸಿದಳು. ಆದಕ್ಕೆ ಅವನು "ರಂಗಿ ಅಂತ ಇವಳು ಕೂಲೀಗೆ ಬರುತ್ತಿದ್ದಳು. ನಿನ್ನೆ ಏನೋ ಕಷ್ಟಸುಖ ಹೇಳಿಕೊಂಡಳು. ಒಂದು ರೂಪಾಯಿ ಕೊಟ್ಟೆ. ಇವತ್ತು ಇನ್ನೇನಾದರೂ ಕೇಳೋದಕ್ಕೆ ಬಂದಿರಬಹುದು. ಮಗು ವೊಂದಿದೆಯಂತೆ" ಎಂದು "ಏನಮ್ಮ, ಏನಾಗಬೇಕಾಗಿದೆ ನಿನಗೆ, ಯಾಕೆ ಬಂದೆ ?" ಎಂದು ಕೇಳಿದ.

ರಂಗಿಗೆ ಏನನ್ನು ನುಡಿಯುವುದಕ್ಕೂ ತೋರಲಿಲ್ಲ. ತಾನೆಣಿಸಿದುದೇ ಒಂದು, ಇಲ್ಲಿ ಆದುದೇ ಒಂದು. "ಯಾಕಮ್ಮ ಏನು ಬೇಕಾಗಿದೆ ಹೇಳಮ್ಮ. ಸಂಕೋಚಪಡಬೇಡ" ಎಂದು ಆತ ಕೇಳುತ್ತಿದ್ದಾನೆ. ಏನೆಂದು ಅವಳು ಕೇಳಬೇಕು ! "ಏನೂ ಇಲ್ಲ" ಎಂದು ಹೊರಟಳು. ಅವನು ತನ್ನ ಹೆಂಡತಿಗೆ "ವಿಚಾರಿಸು ಯಾತಕ್ಕೆ ಬಂದಿದ್ದಾಳೋ ನನಗೆ ಹೇಳುವುದಕ್ಕೆ ಅವಳಿಗೆ ನಾಚಿಕೆಯಿರಬಹುದು" ಎಂದು ಹೇಳಿ ಒಳಕ್ಕೆ ಎದ್ದುಹೋದ. ಆಕೆ ವಿಚಾರಿಸುವುದಕ್ಕೆ ಹೋಗಲು "ಏನೂ ಇಲ್ಲ" ಎನ್ನುತ್ತಾ ಅವರ ಮನೆಯಿಂದ ಹೊರಟುಬಿಟ್ಟಳು. ಹೊರಟಾಗ ದಾರಿಯಲ್ಲಿ ಕಣ್ಣಿ ಹನಿ ತೊಟ್ಟಿಕ್ಕುತ್ತಿತ್ತು.

ದಾರಿಯಲ್ಲಿ ತಲೆಯೆತ್ತಿ ಮಾವಿನ ತೋಪಿನ ಕಡೆ ನೋಡಿದಳು. ಅಲ್ಲಿ ಅವಳ ಗಂಡನೂ, ಅವಳೂ ಲೋಲುಪತೆಯಲ್ಲಿದ್ದಾರೆ. ಅವಳನ್ನು ದೃಷ್ಟಿಸಲೇ ಇಲ್ಲ.

ಮನೆಗೆ ಬಂದು ಗೋಳೋ ಎಂದು ಅತ್ತಳು. ತನ್ನ ತಾಯಿಯನ್ನು ನೆನೆದುಕೊಂಡಳು. ತನ್ನನ್ನು ಅವಳೆಡೆಗೆ ಕರೆದುಕೋ ಎಂದು ಮೊರೆಯಿಟ್ಟಳು, ಪಕ್ಕದ ಮನೆಯವಳು ಮಗುವನ್ನು ಕರೆತರಲು ಅದನ್ನು ತೆಗೆದುಕೊಂಡು ಅದಕ್ಕೆ ಮೊಲೆಹಾಲಿತ್ತಳು. ಮುದ್ದಿಸಿದಳು. ಅದರ ಆಟದಲ್ಲಿ ಕೆಲಕಾಲ ಮನಮರೆತಳು. ಪುನಃ ಅದರ ಕಾರಣಭೂತನ ನೆನಪಾಗಲು ಹಲ್ಲ ಕಡಿದಳು. ಅವನು ಹಿಂತಿರುಗಿ ಬಂದರೆ ಮನೆಯೊಳಕ್ಕೆ ಕಾಲಿಡುವುದಿಲ್ಲವೆಂದು ನಿರ್ಧರಿಸಿಕೊಂಡು ಅದರೊಂದಿಗೆ ಹಾಸಿಗೆಯ ಮೇಲೆ ಹಾಗೇ ಪವಡಿಸಿಕೊಂಡಳು.

ರಾತ್ರಿಯಾಯಿತು. ಪುನಃ ಚಳಿಗೆ, ಕೊರೆತಕ್ಕೆ ಆರಂಭವಾಯಿತು. ಮುಸುಕಿಟ್ಟುಕೊಂಡು ಮಲಗಿಕೊಂಡಳು. ನಡುರಾತ್ರಿಯಾಯಿತು. ಯಾರೋ ಹೊರಗೆ ಬರುತ್ತಿರುವಂತೆ ಕಾಲ್ಸಪ್ಪಳ ಕೇಳಿಸಿತು. ಅವಳು ಮನೆಯ ಬಾಗಿಲನ್ನು ಹಾಕುವುದನ್ನೇ ಮರೆತಿದ್ದಳು. ಬಂದವನು ಬಾಗಿಲನ್ನು ತೆಗೆದುಕೊಂಡು ಒಳಹೊಕ್ಕನು. ಒಳಗೆ ದೀಪ ಸಣ್ಣಗೆ ಉರಿಯುತ್ತಿತ್ತು. ಅವಳು ಮುಸುಕಿಟ್ಟುಕೊಂಡು ಕಿಂಡಿಯಲ್ಲಿ ನೋಡುತ್ತಿದ್ದಳು. ಅವನಿಗೆ ಬಹಳ ಹಸಿವಿದ್ದಿರಬೇಕು. ಬಂದವನು ನೆಲವುಗಳನ್ನೆಲ್ಲಾ ಹುಡುಕಿದನು. ತನ್ನ ಹೆಂಡತಿಯನ್ನು ಮಾತನಾಡಿಸುವ ಧೈರ್ಯವಿಲ್ಲ. ಹಾಸಿಗೆಯ ಬಳಿಗೆ ಬಂದನು, ತನ್ನ ಮಗುವನ್ನು ನೋಡಿದನು. ಅದರ ಮುಖವನ್ನೇ ಈಕ್ಷಿಸುತ್ತಾ ನಿಂತುಕೊಂಡನು. ಮೆಲ್ಲಗೆ ಅದಕ್ಕೆ ಮುತ್ತೊಂದೊತ್ತಿದನು. ಅವಳು ಅವನನ್ನೂ ಅವನ ಮಗುವನ್ನೂ ಅವನ ಆಗಿನ ನಡುವಳಿಕೆಗಳನ್ನೂ ಓರೆಗಣ್ಣಿನಲ್ಲಿಯೇ ನೋಡುತ್ತಿದ್ದಳು. ಆ ಮಗುವಿಗೂ ಅವನಿಗೂ ಏನು ಸಾಮ್ಯ! ಎಷ್ಟು ಹೋಲಿಕೆ. ಅವನು ಚಳಿಯಿಂದ ನಡುಗುತ್ತಾ ಹಾಸಿಗೆಯ ಬಳಿ ನಿಂತಿದ್ದಾನೆ. ಅವಳಿಗೆ ಇನ್ನು ತಡೆಯಲಾಗಲಿಲ್ಲ. ಕೈಗಳನ್ನು ನೀಡಿದಳು. ಒಡನೆಯೇ ಅವನನ್ನು ಆ ಚಳಿಯಿಂದ ಕವಿತಿದ್ದ ಅವನ ಒಡಲನ್ನು ತನ್ನ ವಕ್ಷಃಸ್ಥಲದಲ್ಲಿಟ್ಟುಕೊಂಡು ತನ್ನ ಕಾವಿನಲ್ಲಿ ಅವನ ಕಂಪನವನ್ನು ನಿಲ್ಲಿಸಿದಳು. ತನ್ನ ಹೃದಯದಲ್ಲವನಿಗೆ ಪುನಃ ಸ್ಥಾನವಿತ್ತಳು. ಪ್ರತೀಕಾರ! ಪ್ರತೀಕಾರವೇ? ಹಿಂದೂ ಗೃಹಿಣಿಯರಲ್ಲೆಲ್ಲಿನ ಪ್ರತೀಕಾರ! ಅವನ ಹೃದಯಕಂಪನವನ್ನೂ ನಿಲ್ಲಿಸಿದಳೇ? ನೋಡಬೇಕು.

---